# 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ

## ಹಾರೈಸಿರುವ ಆಜೀವ ಸದಸ್ಯರ ಬಳಗ

1131 ಶ್ರೀ ಟಿ. ಪುಟ್ಟಪ್ಪ, ಅ॥ ಇಂಜಿನೀಯರ್ ತಿಪಟೂರು, ತುಮಕೂರು ಜಿಲ್ಲೆ.

1132 ಸೆಕ್ರೆಟರಿ, ವೀರಶೈವಾನಂದ ಆಶ್ರಮ, ತಿಪಟೂರು ತುಮಕೂರು ಜಿಲ್ಲೆ

1133 ಎಸ್. ರುದ್ರಸ್ವಾಮಿ S/o ಕೆ. ಎಸ್. ಮಲ್ಲಿಕಾರ್ಜುನಪ್ಪ, ಜನರಲ್ ಮರ್ಚೆಂಟ್, ಟಿ. ನರಸೀಪುರ, ಮೈಸೂರು ಜಿಲ್ಲೆ.

1134 ಎಸ್ ಎಸ್ ನಂದೀಶಪ್ಪ, S/o ಎಸ್. ಸಿದ್ಧನಂಜಪ್ಪ (ಹೊಸ ಮನೆ) ಸುರೇನಹಟ್ಟಿ ತುರುವೇಕೆರೆ ಪೋಸ್ಟ್, ತುಮಕೂರು ಜಿಲ್ಲೆ.

1135 ಶ್ರೀಮತಿ ಮಂಜುಳ W/o ಜಯಶಂಕರ್, ಜನರಲ್ ಮರ್ಚೆಂಟ್, ಗೋಣೇಪುರ, ಕೆ. ಗುಡ್ಡದಹಳ್ಳಿ ಪೋಸ್ಟ್, ದಕ್ಷಿಣ ಬೆಂಗಳೂರು.

1136 ಬಿ. ಮುದ್ದಪ್ಪ, ಅಂಗಡಿಬೀದಿ ನಜರಾಬಾದ್ ಮೈಸೂರು 10.

1137 ಶಿವಯ್ಯ, ಕಿರ್ಲೋಸ್ಕರ್ ಕಾಲೋನಿ, ಮಹಾಲಕ್ಷ್ಮೀಪುರಂ, ಬೆಂಗಳೂರು 86

1138 ಎ.ಆರ್. ಕೆಂಪಣ್ಣ ಮತ್ತು ಮಕ್ಕಳು, ಹೊನ್ನರಾಯನಹಳ್ಳಿ ಮೊದಲ ಕೋಟೆ ಪೋಸ್ಟ್, ನೆಲಮಂಗಲ ತಾಲ್ಲೋಕ್, ಬೆಂಗಳೂರು ಜಿಲ್ಲೆ.

1139 ಬಿ.ಎಂ. ಬಸವರಾಜು, ಬಾಣವಾಡಿ ಪೋಸ್ಟ್, ಮಾಗಡಿ ತಾಲ್ಲೋಕ್, ಬೆಂಗಳೂರು ಜಿಲ್ಲೆ

1140 ಬಿ. ಬಸವರಾಧ್ಯ ನಿವೃತ್ತ ಶಿಕ್ಷಕ, ಕೆ. ಬಂಡೇಮಠ ಬಾಣವಾಡಿ ಪೋಸ್ಟ್, ಮಾಗಡಿ ತಾಲ್ಲೋಕ್, ಬೆಂಗಳೂರು ಜಿಲ್ಲೆ.

(ಮುಂದುವರಿಯುತ್ತದೆ.)

## ಸಮಸ್ಯೆಯ ಸುಳಿಯಲ್ಲಿ

# ಶ್ರೀ ಸಿದ್ಧಗಂಗಾ ಕ್ಷೇತ್ರ

ಕ್ಷೇತ್ರಾಧ್ಯಕ್ಷ

**ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು**

ನೀಡಿರುವ ಒಂದು ಸ್ಪಷ್ಟೀಕರಣ

ಪ್ರಕಟಣೆ :

ಶ್ರೀ ಸಿದ್ಧಗಂಗಾ ಮಠ

ತುಮಕೂರು ಜಿಲ್ಲೆ — ಕರ್ನಾಟಕ





ಬಂಧುಗಳೇ,

ಆರು ನೂರು ವರ್ಷಗಳ ಸಾತ್ವಿಕ ಪರಂಪರೆಯನ್ನು ಪಡೆದ ಶ್ರೀ ಸಿದ್ಧಗಂಗಾ ಮಠಕ್ಕೆ ಅನಿರೀಕ್ಷಿತ ಆಘಾತವುಂಟಾಗಿದೆ; ಸಂದಿಗ್ಧ ಪರಿಸ್ಥಿತಿ ಬಂದೊದಗಿದೆ. ಕಳೆದ ಏಳೆಂಟು ತಿಂಗಳ ಅವಧಿಯಲ್ಲಿ ಮಠದಲ್ಲಿ ನಡೆದಿರುವ ಘಟನೆಗಳು ಅತ್ಯಂತ ಅಹಿತಕರ; ಊಹೆಗೂ ನಿಲುಕದ ವಿಚಾರ. "ಎಂತಹ ಮಠಕ್ಕೆ ಎಂತಹ ಆತಂಕವುಂಟಾಯಿತು ?"—ಇದು ಅಡಿಯಿಂದ ಮುಡಿಯವರೆಗೆ ಮಠವನ್ನು ಬಲ್ಲ ಪ್ರತಿಯೊಬ್ಬರೂ ಇಂದು ಆಡುತ್ತಿರುವ ಮಾತು. ಧರ್ಮ-ದಾಸೋಹ ಮೊದಲಾದ ಸೇವೆಗಳಲ್ಲಿ ವಿಶ್ವಾಸವಿಟ್ಟುಕೊಂಡವರಿಗೆಲ್ಲ ಹೃದಯ ಕಲಕುವ ಸನ್ನಿವೇಶ.

ಎಲ್ಲರಿಗೂ ತಿಳಿದಂತೆ ಶ್ರೀ ಸಿದ್ಧಗಂಗಾ ಮಠವು ಯಾವುದೇ ಪೂರ್ವಾರ್ಜಿತ ಆಸ್ತಿ, ಅಂತಸ್ತು ಮತ್ತು ಅಧಿಕಾರಗಳನ್ನು ಅವಲಂಬಿಸಿಕೊಂಡು ಬಂದಿರುವ ಮಠವಲ್ಲ. ಜನಸಮುದಾಯದ ಶ್ರದ್ಧಾಭಕ್ತಿ ಮತ್ತು ಸೇವಾನಿಷ್ಠೆಗಳನ್ನು ಅವಲಂಬಿಸಿರುವ ವಿಶಿಷ್ಟ ಪರಂಪರೆಯ ಮಠ. ಈ ಮಠಕ್ಕೆ ಮುಗ್ಧಭಕ್ತರಿಂದ ಹಿಡಿದು ಬುದ್ಧಿಜೀವಿಗಳವರೆಗೆ, ಜನಸಾಮಾನ್ಯರಿಂದ ಅನುಕೂಲಸ್ಥರವರೆಗೆ ಅಸಂಖ್ಯಾತ ಭಕ್ತರಿದ್ದಾರೆ; ಅಭಿಮಾನಿಗಳಿದ್ದಾರೆ. ಯಾವುದೇ ಜಾತಿ-ಮತ, ಸ್ಥಾನ-ಮಾನಗಳ ಭೇದ ಭಾವವಿಲ್ಲದೆ ಮಠದ ಘನತೆ-ಗೌರವ ಮತ್ತು ಪಾವಿತ್ರ್ಯ-ಪರಂಪರೆಗಳ ರಕ್ಷಣೆಗಾಗಿ ನೆರವಾಗುತ್ತ ಬಂದಿರುವ ಅವರೆಲ್ಲರೂ ಮಠಕ್ಕೆ ಇಂದು ಬಂದೊದಗಿರುವ ಆಘಾತಕ್ಕಾಗಿ ನೊಂದುಕೊಂಡಿದ್ದಾರೆ; ಕವಿದಿರುವ ಕಳಂಕಕ್ಕಾಗಿ ಕಳವಳಗೊಂಡಿದ್ದಾರೆ; ಸಮಸ್ಯೆಯ ಪರಿಹಾರಕ್ಕಾಗಿ ಕಾತರದಿಂದ ಕಾಯುತ್ತಿದ್ದಾರೆ. ಇಂತಹ ಗಂಭೀರ ಸನ್ನಿವೇಶದಲ್ಲೂ ಕೆಲವು ಸ್ವಹಿತಾಸಕ್ತ ಮೂಲಗಳು ಪರಿಸ್ಥಿತಿಯ ದುರುಪಯೋಗ ಮಾಡಿಕೊಂಡು ಮಠದ ಬಗ್ಗೆ ಅವ್ಯಾಹತ ಅಪಪ್ರಚಾರ ನಡೆಸುತ್ತಿರುವುದು ಅತ್ಯಂತ ವಿಷಾದದ ಸಂಗತಿ.

ಈ ಸಂದರ್ಭದಲ್ಲಿ ನಾವು ಒಂದು ಹೇಳಿಕೆಯನ್ನು ನೀಡುವುದು ಅಗತ್ಯವೆಂದು ಮಠದ ಅನೇಕ ಭಕ್ತಾಭಿಮಾನಿಗಳು ಮತ್ತು ಸಮಾಜ ಪ್ರಮುಖರು ಬಿನ್ನಹ ಮಾಡಿಕೊಂಡ ಕಾರಣ ಈ ಸ್ಪಷ್ಟೀಕರಣ ನೀಡಲಾಗಿದೆ. ಮಠದ ಬಗೆಗೆ ಅಪಾರ ಗೌರವ, ಅಭಿಮಾನ ಮತ್ತು ಆಸಕ್ತಿಗಳನ್ನು ಹೊಂದಿರುವ ಸಮಸ್ತರೂ ಸತ್ಯಾಂಶವನ್ನು ಅರಿಯಲು ಮತ್ತು ನಮ್ಮ ವೈಯಕ್ತಿಕ ನಿಲುವನ್ನು ಅರ್ಥಮಾಡಿಕೊಳ್ಳಲು ಈ ಸ್ಪಷ್ಟೀಕರಣ ನೆರವಾಗುವುದೆಂದು ನಿರೀಕ್ಷಿಸಲಾಗಿದೆ.

## ನಮ್ಮ ಅವಧಿ

ನಮ್ಮ ಪೂಜ್ಯ ಗುರುಗಳಾದ ಶ್ರೀ ಉದ್ಧಾನ ಶಿವಯೋಗಿಗಳ ಆಜ್ಞೆಯಂತೆ 1930ರ ಮಾರ್ಚ್ 3ರಂದು ನಾವು ಶ್ರೀ ಸಿದ್ಧಗಂಗಾ ಮಠದ ಅಧಿಕಾರವನ್ನು ವಹಿಸಿಕೊಂಡೆವು. ಗುರುಗಳ ಮಾರ್ಗದರ್ಶನದಲ್ಲಿ ಮೊದಲ ಹನ್ನೊಂದು ವರ್ಷ ಕಾಲ ಅಗತ್ಯವಾದ ಅಧ್ಯಯನ ಮತ್ತು ಜ್ಞಾನ ಸಂಪಾದನೆಯಲ್ಲಿ ನಿರತರಾಗಿದ್ದೆವು. ಜೊತೆಗೆ ಅವರು ವಹಿಸಿದ ದಾಸೋಹ ಮತ್ತು ಶಿಕ್ಷಣ ಸಂಸ್ಥೆಗಳ ಅಭಿವೃದ್ಧಿ ಕಾರ್ಯವನ್ನೂ ನೋಡಿಕೊಳ್ಳುತ್ತಿದ್ದೆವು. ಅನೇಕ ಸಂದರ್ಭಗಳಲ್ಲಿ ಗುರುಗಳು ನಮ್ಮನ್ನು ಪರೀಕ್ಷೆಯ ಒರೆಗಲ್ಲಿಗೆ ಹಚ್ಚುತ್ತಿದ್ದುದುಂಟು. ಆ ಪರೀಕ್ಷೆಗಳ ಹಿಂದೆ ಎಂತಹ ಸದ್ಭಾವನೆಯಿತ್ತೆಂಬುದು ನಮಗೆ ಅನುಭವದಿಂದ ವೇದ್ಯವಾಗಿದೆ.

## ಶ್ರೀ ಮಠದ ಹಿನ್ನೆಲೆ

ಚಾರಿತ್ರಿಕ ಆಧಾರಗಳಿಂದ ತಿಳಿದು ಬರುವಂತೆ ಶ್ರೀ ಸಿದ್ಧಗಂಗಾ ಮಠವು ಸುಮಾರು ಆರು ನೂರು ವರ್ಷಗಳ ಹಿಂದೆ ಸ್ಥಾಪಿತವಾದದ್ದು. ಘನಮಹಿಮರಾದ ಗೋಸಲ ಸಿದ್ಧೇಶ್ವರರು ಈ ಮಠದ ಸ್ಥಾಪಕರು. ಅವರು ಮೂಲತಃ ಹರದನಹಳ್ಳಿಯ 'ಶೂನ್ಯಸಿಂಹಾಸನ'ದ ಜಗದ್ಗುರುಗಳು. ಅಂತಹ ಮಹಿಮಾನ್ವಿತರ ಪರಂಪರೆಯಲ್ಲಿ ಶಂಕರ ಸ್ವಾಮಿಗಳು, ಚನ್ನಬಸವೇಶ್ವರರು, ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರು, ಬೋಳ ಬಸವೇಶ್ವರರು ಮೊದಲಾದ ಮಹಾಪುರುಷರು ಈ ಮಠದ ಮೇಲ್ವಿಚಾರಣೆ ನಡೆಸಿದ್ದಾರೆ. ಆಗಿನಿಂದಲೂ ಈ ಮಠ ಜನಹಿತ ಕಾರ್ಯಕ್ಕೆ ಮೀಸಲಾಗಿದೆ.

ಶ್ರೀ ಸಿದ್ಧಗಂಗಾ ಮಠದಲ್ಲಿ ಅನ್ನ ಮತ್ತು ಜ್ಞಾನ ದಾಸೋಹ ಸೇವೆಯ ಅಂಕುರಾರ್ಪಣವಾದದ್ದು 19ನೆಯ ಶತಮಾನದ ಉತ್ತರಾರ್ಧದಲ್ಲಿ; ಪೂಜ್ಯರಾದ ಶ್ರೀ ಅಡವಿ ಸ್ವಾಮಿಗಳ ಕಾಲದಲ್ಲಿ. ಅವರ ನಂತರ ಪರಮ ತಪಸ್ವಿಗಳಾದ ಶ್ರೀ ಉದ್ಧಾನ ಶಿವಯೋಗಿಗಳು ಮಠದ ಅಧಿಕಾರ ವಹಿಸಿಕೊಂಡರು. ಅವರು 1917ರಲ್ಲಿ ಅಧಿಕೃತವಾಗಿ ವೇದ ಮತ್ತು ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿದರು. ಮೊದಲ ಬಾರಿಗೆ ಸಾರ್ವಜನಿಕ ವಿದ್ಯಾರ್ಥಿನಿಲಯವೊಂದನ್ನು ಸ್ಥಾಪಿಸಿ 40 ಜನ ವಿದ್ಯಾರ್ಥಿಗಳಿಗೆ ಯಾವುದೇ ಜಾತಿ-ಮತಗಳ ಭೇದವಿಲ್ಲದೆ ಉಚಿತ ಊಟ-ವಸತಿಗಳ ವ್ಯವಸ್ಥೆ ಮಾಡಿದರು. ಪ್ರಾಯಶಃ, ನಮಗೆ ತಿಳಿದ ಮಟ್ಟಿಗೆ ಯಾವ ನಿರ್ಬಂಧವೂ ಇಲ್ಲದೆ ಎಲ್ಲ ಜನಾಂಗದವರೂ ಸಂಸ್ಕೃತಾಭ್ಯಾಸ ಮಾಡಬಹುದೆಂದು ಸಾರಿ ಕಾರ್ಯ ಪ್ರವೃತ್ತರಾದ

ಪ್ರಥಮ ಧರ್ಮಗುರುಗಳೆಂದರೆ ಶ್ರೀ ಉದ್ಧಾನ ಶಿವಯೋಗಿಗಳು. ಅವರು ನೆಟ್ಟ ಉಚಿತ ಶಿಕ್ಷಣ ಮತ್ತು ವಿದ್ಯಾರ್ಥಿನಿಲಯದ ಸಸಿಯ ಬೆಳವಣಿಗೆಗೆ ಭಿಕ್ಷಾಟನೆ ಮತ್ತು ದಾನಿಗಳ ದೇಣಿಗೆಗಳೇ ಆಧಾರವಾಗಿದ್ದವು. ಆಗ ಮಠಕ್ಕೆ ಆಸ್ತಿಯಾಗಿದ್ದುದು ಕೇವಲ ಅತ್ಯಲ್ಪ ಪ್ರಮಾಣದ ಖುಷ್ಕಿ ಭೂಮಿ ಮಾತ್ರ. ಆದರೆ ಮಠದ ಸೇವೆಯಿಂದ ಆಕರ್ಷಿತರಾಗಿ ಜಾತಿ-ಮತ-ಕೋಮುಗಳ ವ್ಯತ್ಯಾಸವಿಲ್ಲದೆ ಎಲ್ಲ ವರ್ಗದ ಜನರೂ ಮಠದ ಭಕ್ತರಾದರು; ನಿಜವಾದ ಆಸ್ತಿಯಾದರು. ಮಠವೂ ಕೂಡ ಅವರೆಲ್ಲರ ಮಧ್ಯೆ ಸಮಾನ ಭಾವನೆಯಿಂದ ಸಾಮರಸ್ಯ ಕಾಪಾಡಿಕೊಂಡು ಬರುತ್ತಿತ್ತು. ಶ್ರೀ ಉದ್ಧಾನ ಶಿವಯೋಗಿಗಳ ಈ ಧ್ಯೇಯ-ಧೋರಣೆಗಳನ್ನು ಮಠದಲ್ಲಿ ಇಂದಿಗೂ ಉಳಿಸಿಕೊಂಡು ಬರಲಾಗಿದೆ.

ಶ್ರೀ ಉದ್ಧಾನ ಶಿವಯೋಗಿಗಳು ಸ್ಥಾಪಿಸಿದ ಸಂಸ್ಕೃತ ಪಾಠಶಾಲೆ 1937ರಲ್ಲಿ ಕಾಲೇಜಾಗಿ ಪರಿವರ್ತನೆಗೊಂಡಿತು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗುವುದು ಆಗ ನಮ್ಮ ಗುರುಗಳಿಗೆ ಇಷ್ಟವಿರಲಿಲ್ಲ. ಆದರೂ ಆಸಕ್ತಿಯಿಂದ ಬಂದ ಬಡ ವಿದ್ಯಾರ್ಥಿಗಳನ್ನು ಹಿಂದಕ್ಕೆ ಕಳುಹಿಸಲು ಮನಬಾರದೆ ಗುರುಗಳ ಮನವೊಲಿಸಿದೆವು. ಪರಿಣಾಮವಾಗಿ 1941ರ ವೇಳೆಗೆ 120 ವಿದ್ಯಾರ್ಥಿಗಳಿಗೆ ಆಶ್ರಯ ನೀಡಲು ಸಾಧ್ಯವಾಯಿತು. ಸಂಸ್ಥೆ ಬೆಳೆದಂತೆ ಸಹಜವಾಗಿಯೇ ಖರ್ಚು ವೆಚ್ಚಗಳೂ ಹೆಚ್ಚಾದವು. ಭಿಕ್ಷಾಟನೆಯಿಂದ ಆ ವೆಚ್ಚವನ್ನು ಭರಿಸತೊಡಗಿದೆವು. ಸಾರ್ವಜನಿಕರೂ ನೆರವಾದರು. ಮಠದ ಸೇವೆಯನ್ನು ಗಮನಿಸಿ ಸರ್ಕಾರವೂ ಸ್ವಲ್ಪ ಜಮೀನು ನೀಡಿತು.

ನಮ್ಮನ್ನು ಹೆಜ್ಜೆ ಹೆಜ್ಜೆಗೆ ಒರೆಗೆ ಹಚ್ಚಿ ಮಾರ್ಗದರ್ಶನ ಮಾಡುತ್ತಿದ್ದ ಪೂಜ್ಯ ಶ್ರೀ ಉದ್ಧಾನ ಶಿವಯೋಗಿಗಳು 1941ರಲ್ಲಿ ಲಿಂಗೈಕ್ಯರಾದರು. ಮಠದ ನಿರ್ವಹಣೆಯ ಭಾರವನ್ನೆಲ್ಲ ನಾವೇ ಹೊರಬೇಕಾಯಿತು. ದಿನದಿನಕ್ಕೆ ದಾಸೋಹದ ವೆಚ್ಚ ಹೆಚ್ಚಾಗತೊಡಗಿತ್ತು. ಆದರೂ ಧೃತಿಗೆಡಲಿಲ್ಲ. ಗುರು ರಕ್ಷೆಯಲ್ಲಿ ಭರವಸೆಯಿಟ್ಟು ಮುನ್ನಡೆಯಲಾಯಿತು.

## ಶಿಕ್ಷಣ ಸಂಸ್ಥೆಗಳು

ಧಾರ್ಮಿಕ ಕೇಂದ್ರವಾದ ಶ್ರೀ ಸಿದ್ಧಗಂಗಾ ಮಠ ಒಂದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವೂ ಆಗಬೇಕೆಂಬುದು ನಮ್ಮ ಆಶಯವಾಗಿತ್ತು. ಅಂತೆ 1944ರಲ್ಲಿ ತುಮಕೂರಿನಲ್ಲಿ ಮಠದ ವತಿಯಿಂದ 'ಸಿದ್ಧಗಂಗಾ ಹೈಸ್ಕೂಲ್' ಎಂಬ ವಿದ್ಯಾಸಂಸ್ಥೆಯನ್ನು ಆರಂಭಿಸಿದೆವು. ನಂತರ ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಇದ್ದ ಶಿಕ್ಷಣ ಸೌಲಭ್ಯದ ಕೊರತೆಯನ್ನು ಗಮನಿಸಿ ಮಠದ ಆವರಣದಲ್ಲಿಯೇ ವಸತಿ ಪ್ರೌಢಶಾಲೆಯನ್ನು ತೆರೆಯಲಾಯಿತು. ಆ ಮುಂದೆ ಉಪಾಧ್ಯಾಯರ ತರಬೇತಿ



ಕೇಂದ್ರ, ಅಂಗವಿಕಲರ ಶಾಲೆ, ಕನ್ನಡ ಪಂಡಿತ ತರಗತಿ, ಇತ್ಯಾದಿ ವಿವಿಧ ಹಂತದ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಲಾಯಿತು. ಅಗತ್ಯವಾದ ಕಟ್ಟಡಗಳನ್ನು ನಿರ್ಮಿಸಲಾಯಿತು.

ಮಠದಲ್ಲಿ ಸೌಲಭ್ಯ ಹೆಚ್ಚಿದಂತೆ ವಿದ್ಯಾರ್ಥಿಗಳ ಸಂಖ್ಯೆಯೂ ಭಾರಿ ಪ್ರಮಾಣದಲ್ಲಿ ಹೆಚ್ಚತೊಡಗಿತು. ಗ್ರಾಮಾಂತರ ಪ್ರದೇಶದಿಂದ ಬರುತ್ತಿದ್ದ ಮುಗ್ಧ ಬಡ ಮಕ್ಕಳು ಕಲಿಯುವುದನ್ನು ನೋಡುವುದೇ ನಮಗೊಂದು ಹರ್ಷದ ಅನುಭವವಾಗಿತ್ತು. ದಿನದಿನಕ್ಕೆ ಹೆಚ್ಚಾಗುತ್ತಿದ್ದ ಮಠದ ಕಾರ್ಯಭಾರ ನಿರ್ವಹಣೆಗೆ ಆ ಮಕ್ಕಳೇ ನಮಗೆ ಸ್ಫೂರ್ತಿಯಾಗಿದ್ದರು.

ಶ್ರೀ ಸಿದ್ಧಲಿಂಗೇಶ್ವರರ ಅನುಗ್ರಹ, ಶ್ರೀ ಉದ್ಧಾನ ಶಿವಯೋಗಿಗಳ ಕೃಪೆ, ಭಕ್ತ ಸಮುದಾಯದ ಬೆಂಬಲ ಮತ್ತು ಸಾರ್ವಜನಿಕ ಹಾಗೂ ಸರ್ಕಾರದ ನೆರವು ಸಹಕಾರಗಳ ಫಲವಾಗಿ ಮಠದ ಶೈಕ್ಷಣಿಕ ಚಟುವಟಿಕೆಗಳನ್ನು ಮತ್ತಷ್ಟು ವಿಸ್ತರಿಸಲು ಸಾಧ್ಯವಾಯಿತು. 1960ರಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರೌಢಶಾಲೆಗಳನ್ನು ತೆರೆಯಲಾರಂಭಿಸಿದೆವು. 1962ರಲ್ಲಿ 'ಸಿದ್ಧಗಂಗಾ ಎಜುಕೇಶನ್ ಸೊಸೈಟಿ' ಸ್ಥಾಪಿತವಾಯಿತು. 1963ರಲ್ಲಿ 'ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಾಜಿ' ಸಂಸ್ಥೆಯು ಆರಂಭವಾಯಿತು. 1966ರಲ್ಲಿ ಸಿದ್ಧಗಂಗಾ ವಿಜ್ಞಾನ, ಕಲೆ ಮತ್ತು ವಾಣಿಜ್ಯ ಕಾಲೇಜು, ನಂತರ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ಸಿದ್ಧಗಂಗಾ ಸಂಜೆ ಕಾಲೇಜು ಮತ್ತು ಮಹಿಳಾ ಕಾಲೇಜುಗಳನ್ನು ಆರಂಭಿಸಲಾಯಿತು. ಈಗ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ಗ್ರಾಮಾಂತರ ಪ್ರೌಢಶಾಲೆಗಳೂ ಸೇರಿದಂತೆ ಶಿಶುವಿಹಾರದಿಂದ ಹಿಡಿದು ಇಂಜನಿಯರಿಂಗ್ ಕಾಲೇಜಿನವರೆಗೆ ಒಟ್ಟು 70 ಶಿಕ್ಷಣ ಸಂಸ್ಥೆಗಳಿವೆ. ಸುಮಾರು 20 ಸಾವಿರ ವಿದ್ಯಾರ್ಥಿಗಳಿದ್ದಾರೆ. ಇವರಲ್ಲಿ ನಾನಾ ಕೋಮುಗಳಿಗೆ ಸೇರಿದ 4 ಸಾವಿರಕ್ಕೂ ಹೆಚ್ಚು ಮಕ್ಕಳಿಗೆ ಉಚಿತ ಊಟ ಮತ್ತು ವಸತಿಗಳ ಸೌಲಭ್ಯವನ್ನು ಶ್ರೀಮಠದಲ್ಲಿ ಕಲ್ಪಿಸಲಾಗಿದೆ.

## ದಾಸೋಹ ನಿರ್ವಹಣೆ

ಶ್ರೀ ಮಠದ ಕಾರ್ಯ ಚಟುವಟಿಕೆಗಳು ವಿಸ್ತಾರಗೊಂಡಂತೆ ಅಭಿಮಾನಿಗಳ ಸಂಖ್ಯೆಯೂ ಹೆಚ್ಚಾಗಿದೆ. ಸಿದ್ಧಗಂಗಾ ಕ್ಷೇತ್ರಕ್ಕೆ ಬಂದು ಹೋಗುವ ಭಕ್ತರೂ ಹೆಚ್ಚಾಗಿದ್ದಾರೆ. ನಾಡಿನ ಮತ್ತು ಹೊರನಾಡಿನ ಅನೇಕ ದಾನಿಗಳು ಉದಾರವಾಗಿ ಕೊಡುಗೆಗಳನ್ನು ನೀಡುತ್ತಿದ್ದಾರೆ. ಸಾಮಾನ್ಯ ಜನರಿಂದ ಶ್ರೀಮಂತರವರೆಗೆ ಎಲ್ಲರೂ ಈ ಕೊಡುಗೆಯಲ್ಲಿ ಪಾಲುಗೊಂಡಿದ್ದಾರೆ. ಬೆಂಗಳೂರಿನಲ್ಲಿ ದಾನಿಗಳು ಕೊಟ್ಟ ಕೆಲವು ಕಟ್ಟಡಗಳಿಂದ ಬಾಡಿಗೆ ಬರುತ್ತದೆ. ರಾಜ್ಯ ಸರ್ಕಾರ ನೀಡುತ್ತಿರುವ ಸಹಾಯಧನದ ಜೊತೆಗೆ ಮಠದ ಜಮೀನಿನ ಆದಾಯವೂ ಹೆಚ್ಚಾಗಿದೆ. ಇವೆಲ್ಲವುಗಳ ಫಲವಾಗಿ,

ಮಠದ ದಾಸೋಹಾದಿ ಕಾರ್ಯಗಳಿಗಾಗಿ ನಿತ್ಯ ಆಗುವ ಸುಮಾರು 15-20 ಸಾವಿರ ರೂ.ಗಳ ವೆಚ್ಚವನ್ನು ವರ್ಷದ ಐದಾರು ತಿಂಗಳು ಭರಿಸಲು ಸಾಧ್ಯವಾಗಿದೆ. ಉಳಿದ ಅವಧಿಗೆ ಬೀಳುವ ಕೊರತೆಯನ್ನು ಭಿಕ್ಷಾಟನೆ ಮಾಡಿ ಸರಿತೂಗಿಸಲಾಗುತ್ತಿದೆ. ಮಠದ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳು ಮತ್ತು ಕ್ಷೇತ್ರ ಸಂದರ್ಶನಕ್ಕೆ ಬರುವ ಯಾತ್ರಿಕರೂ ಸೇರಿದಂತೆ ಪ್ರತಿದಿನ ಸುಮಾರು 5 ಸಾವಿರ ಜನರಿಗೆ ಉಚಿತ ಪ್ರಸಾದ ವ್ಯವಸ್ಥೆ ಮಾಡಲಾಗುತ್ತಿದೆ. ಇದಕ್ಕೆ ಒದಗಿಸಬೇಕಾದ ಕಾಳು ಕಡಿ ಮತ್ತು ಕಟ್ಟಿಗೆಯ ಪ್ರಮಾಣವನ್ನು ನಾವು ಹೇಳಬೇಕಾಗಿಲ್ಲ.

ಮಠದಲ್ಲಿ ನಡೆಯುವ ದಾಸೋಹ ಕಾರ್ಯ ಕಂಡು ದೇಶ ವಿದೇಶದ ಅನೇಕ ಪ್ರಮುಖರು ಸೋಜಿಗಪಟ್ಟುದುಂಟು. ಈ ದಾಸೋಹ ಸೇವೆಯನ್ನು ಎಂತಹ ಕಷ್ಟ ಕಾಲದಲ್ಲೂ ಕೈಬಿಡದೆ ಗುರುಕರುಣೆಯಿಂದ ನಡೆಸಿಕೊಂಡು ಬರಲಾಗಿದೆ. ಪ್ರಮಾಣದಲ್ಲಿ ಕಿರಿದೆನಿಸಿದರೂ ಈ ದಾಸೋಹ ಸೇವೆಗೆ ಹಿರಿದಾದ ಕಾಣಿಕೆಯೆಂದರೆ ಗ್ರಾಮಾಂತರ ಪ್ರದೇಶದ ಜನಸಾಮಾನ್ಯರು ಸ್ವಯಂಪ್ರೇರಣೆಯಿಂದ ಮಠಕ್ಕೆ ಬಂದು ಅರ್ಪಿಸುವ ಕಾಳು, ಕಡಿ, ತರಕಾರಿ ಇತ್ಯಾದಿ ವಸ್ತುಗಳು.

## ಹಳೆಯ ವಿದ್ಯಾರ್ಥಿಗಳ ಸಂಘ

ವಿಸ್ತಾರಗೊಂಡಿರುವ ಕಾರ್ಯಭಾರದಲ್ಲಿ ಮಠದ ಹಳೆಯ ವಿದ್ಯಾರ್ಥಿಗಳ ನೆರವು
ಸ್ಮರಣೀಯವಾದುದು. 1955 ರಲ್ಲಿ ಮಠದ ಹಳೆಯ ವಿದ್ಯಾರ್ಥಿಗಳೆಲ್ಲ ಸೇರಿ ಸಂಘ
ವೊಂದನ್ನು ಸ್ಥಾಪಿಸಿಕೊಂಡು ಮಠದ ಎಲ್ಲ ಕಾರ್ಯಚಟುವಟಿಕೆಗಳಲ್ಲೂ ಸ್ವಯಂ ಸೇವೆ
ಸಲ್ಲಿಸುತ್ತಿದ್ದಾರೆ. ವಾರ್ಷಿಕ ಶಿವರಾತ್ರಿ ಸಂದರ್ಭದ ಜಾತ್ರೆಯಲ್ಲಿ ವಸ್ತು ಪ್ರದರ್ಶನ
ಏರ್ಪಡಿಸುವುದು, 'ಸಿದ್ಧಗಂಗಾ' ಮಾಸಪತ್ರಿಕೆ ನಡೆಸುವುದು, ವಿಶೇಷ ಸಭೆ ಸಮಾರಂಭ
ಗಳ ವ್ಯವಸ್ಥೆ ಮಾಡುವುದು, ಸಾಹಿತ್ಯ-ಸಾಂಸ್ಕೃತಿಕ ಸಮಾವೇಶಗಳನ್ನು ಏರ್ಪಡಿಸು
ವುದು ಮೊದಲಾಗಿ ಅನೇಕ ಉಪಯುಕ್ತ ಕಾರ್ಯಗಳಲ್ಲಿ ಹಳೆಯ ವಿದ್ಯಾರ್ಥಿಗಳ ಸೇವೆ
ಮಠಕ್ಕೆ ಸಲ್ಲುತ್ತಿದೆ.

ಈ ಸಂದರ್ಭದಲ್ಲಿ ಎಲ್ಲ ಕೋಮಿನ, ಎಲ್ಲ ಜನಾಂಗದ ಸದಸ್ಯರಿದ್ದಾರೆ. ರೈತರು
ಅಧಿಕಾರಿಗಳು, ಕಾರ್ಮಿಕರು, ರಾಜಕಾರಣಿಗಳು, ಉದ್ಯಮಿಗಳು, ಉಪಾಧ್ಯಾಯರು,
ಸಮಾಜ ಸೇವಕರು—ಹೀಗೆ ಎಲ್ಲ ವರ್ಗದವರೂ ಇದ್ದಾರೆ. ಇವರೆಲ್ಲರೂ ಮಠದ
ಕೆಲಸ ಕಾರ್ಯಗಳೆಂದರೆ ಸ್ವಯಂಸ್ಫೂರ್ತಿಯಿಂದ, ಯಾವುದೇ ಫಲಾಪೇಕ್ಷೆಯಿಲ್ಲದೆ
ಮಠಕ್ಕೆ ಸ್ವಂತ ವೆಚ್ಚದಿಂದ ಬಂದು ಸೇವೆ ಸಲ್ಲಿಸುತ್ತಾರೆ. ಅವರ ಸೇವಾಸಕ್ತಿ ನಿಜಕ್ಕೂ
ನಮ್ಮ ನಿರೀಕ್ಷಣೆಗೆ ಮೀರಿದ್ದು. ಮಠದ ಅಭಿವೃದ್ಧಿಗಾಗಿ ಅವರು ತುಂಬ ಶ್ರಮಿಸಿದ್ದಾರೆ.
ಹಳೆಯ ವಿದ್ಯಾರ್ಥಿಗಳ ಸಂಘ ಮಠದ ಒಂದು ಆಸ್ತಿಯೆಂದರೆ ಅತಿಶಯೋಕ್ತಿ
ಯಾಗಲಾರದು.



## ಉತ್ತರಾಧಿಕಾರ

ಮಠದ ಕಾರ್ಯಭಾರ ಹೆಚ್ಚುತ್ತಿದ್ದಂತೆ ಸಮರ್ಥರಾದ ಉತ್ತರಾಧಿಕಾರಿಗಳನ್ನು ನೇಮಿಸುವ ಬಗ್ಗೆ ನಾವು 1952 ರಿಂದಲೂ ವಿಚಾರಮಾಡುತ್ತಿದ್ದೆವು. ಭಕ್ತರೂ ಈ ಬಗ್ಗೆ ಒತ್ತಾಯಮಾಡುತ್ತಿದ್ದರು. ಅಂತೇ ಮಠದ ಕೆಲವು ಅಭಿಮಾನಿಗಳು ನಮ್ಮ ಸಿದ್ಧಗಂಗಾ ಇಂಜನಿಯರಿಂಗ್ ಕಾಲೇಜಿನಲ್ಲೇ ಅಧ್ಯಾಪಕರಾಗಿದ್ದ ಬಿ. ಇ. ಪದವೀಧರ ಶ್ರೀ ಜಗದೀಶ್ ಅವರತ್ತ ನಮ್ಮ ಗಮನ ಸೆಳೆದರು. 1949 ರಲ್ಲಿ ಜನ್ಮತಾಳಿದ ಶ್ರೀ ಜಗದೀಶ್ ಸೀತಕಲ್ಲು ಗ್ರಾಮದವರು. ಅವರ ಸೌಮ್ಯ ನಡವಳಿಕೆಯನ್ನು ಗಮನಿಸಿದ್ದ ನಮಗೆ ಅಭಿಮಾನಿಗಳ ಸಲಹೆ ಸೂಕ್ತವೆನಿಸಿತು. ಯೋಗ್ಯ ತರಬೇತಿ ನೀಡಿದರೆ ಅವರು ಮಠದ ಪರಂಪರೆಗೆ ತಕ್ಕ ಉತ್ತರಾಧಿಕಾರಿಯಾಗುತ್ತಾರೆಂದು ನಾವು ಬಗೆದೆವು. ಮಠದ ಆಗುಹೋಗುಗಳನ್ನೆಲ್ಲ ಹತ್ತಾರು ವರ್ಷಗಳು ಮಠದಲ್ಲೇ ವಿದ್ಯಾರ್ಥಿಯಾಗಿ ಬಲ್ಲ ಅವರಿಗೆ ಧರ್ಮಗುರುಗಳಿಗೆ ಅಗತ್ಯವಾದ ಜ್ಞಾನ ಸಂಪಾದಿಸಲು ಬೇಕಾದ ಅರ್ಹತೆಗಳಿರುವುದನ್ನು ಪರಿಗಣಿಸಿ, ವಿಶೇಷ ವಿಶ್ವಾಸದಿಂದ ಅವರನ್ನು ಆಯ್ಕೆ ಮಾಡಿದೆವು. 1975 ರ ಮೇ 21 ರಂದು ಅವರಿಗೆ ಶ್ರೀ 'ಗೌರಿಶಂಕರ ಸ್ವಾಮಿಗಳು' ಎಂಬ ಅಭಿದಾನವಿಟ್ಟು ಉತ್ತರಾಧಿಕಾರಿಗಳನ್ನಾಗಿ ಸ್ವೀಕರಿಸಲಾಯಿತು. ಆ ಸಂದರ್ಭದಲ್ಲಿ ನಡೆದ ಅಭೂತಪೂರ್ವ ಮಹೋತ್ಸವಕ್ಕಾಗಿ ಸುಮಾರು 10 ಲಕ್ಷ ರೂ.ಗಳನ್ನು ವೆಚ್ಚಮಾಡಲಾಯಿತು.

ಶ್ರೀ ಗೌರಿಶಂಕರ ಸ್ವಾಮಿಗಳ ನಿರಂಜನ ಪಟ್ಟಾಧಿಕಾರ ಮಹೋತ್ಸವ ನಾಡಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಇತಿಹಾಸದಲ್ಲಿ ನಿಜಕ್ಕೂ ಒಂದು ದಾಖಲೆಯಾಗಿತ್ತು. ಸರ್ವವಿಧದಲ್ಲೂ ಅವರು 'ಗೌರಿಶಂಕರ'ದಂತೆ ಬೆಳೆಯಬೇಕೆಂದು ಮಹೋತ್ಸವಕ್ಕೆ ಬಂದಿದ್ದ ಲಕ್ಷಾಂತರ ಭಕ್ತರು ಮತ್ತು ಹರಗುರು ಚರಮೂರ್ತಿಗಳು ಹಾರೈಸಿದರು. ಅಂತಹ ಒಂದು ಹೃದಯ ಸ್ಪರ್ಶಿ ಸನ್ನಿವೇಶವನ್ನು ಕಾಣಲು ಬಹಳ ದಿನಗಳಿಂದ ಕಾದಿದ್ದ ನಮಗೆ ಅಂದು ಅಪಾರ ಸಂತೋಷವುಂಟಾಯಿತು.

## ಉತ್ತರಾಧಿಕಾರದ ನಂತರ

ನಮ್ಮ ನಿರೀಕ್ಷೆಗೆ ತಕ್ಕಂತೆ ಶ್ರೀ ಗೌರಿಶಂಕರ ಸ್ವಾಮಿಗಳು ಮಠದ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಬೇಕೆಂಬ ಆಶಯದಿಂದ, ಅವರು ಹೊಸ ಸ್ಥಾನಕ್ಕೆ ತಕ್ಕ ಮೂರ್ತಿಯಾಗಲು, ಅಗತ್ಯವಾದ ಎಲ್ಲ ಅಧ್ಯಯನ ಮತ್ತು ಅನುಷ್ಠಾನಕ್ಕೆ ಸೂಕ್ತ ವ್ಯವಸ್ಥೆಮಾಡಲಾಯಿತು. ನಮ್ಮ ಮಠಕ್ಕೆ ಎಲ್ಲ ಕೋಮು, ವರ್ಗ ಮತ್ತು ಅಂತಸ್ತುಗಳ ಭಕ್ತರಿದ್ದಾರೆಂದೂ, ಅವರೆಲ್ಲರ ಭಕ್ತಿ-ಗೌರವಗಳಿಗೆ ಪಾತ್ರವಾಗುವಂತೆ ಸರ್ವರಲ್ಲೂ ಸಮದೃಷ್ಟಿ ಇಟ್ಟುಕೊಳ್ಳಬೇಕೆಂದೂ ಅವರಿಗೆ ನಾವು ತಿಳಿಸಿದೆವು. "ಧರ್ಮಗುರುಗಳಾದವರು ದಾಸೋಹಿಗಳೂ, ಕಾರ್ಯನಿಷ್ಠರೂ, ಸಹನಾಶೀಲರೂ,

ಲಿಂಗಪೂಜಾ ನಿಷ್ಠರೂ, ಶುದ್ಧ ಬ್ರಹ್ಮಚರ್ಯ ಪರಿಪಾಲಕರೂ ಆಗಿರಬೇಕು. ಅವರಿಗೆ
ತತ್ವಶಾಸ್ತ್ರಗಳಲ್ಲಿ ಆಸಕ್ತಿ, ಗುರು-ಹಿರಿಯರಲ್ಲಿ ಗೌರವ ಮತ್ತು ವಿದ್ಯಾ ವಿನಯ
ಸಂಪನ್ನತೆಗಳಿರಬೇಕು. ಮಠದ ಪರಂಪರೆಯ ಮಹತ್ತು-ಬೃಹತ್ತುಗಳನ್ನು, ಶುದ್ಧಿ,
ಸಿದ್ಧಿಗಳನ್ನು ಅರಿತು ಆಚರಿಸಬೇಕು"—ಎಂಬ ವಿಷಯಗಳನ್ನೆಲ್ಲ ಶ್ರೀ ಗೌರಿಶಂಕರ
ಸ್ವಾಮಿಗಳಿಗೆ ನಾವು ತಿಳಿಸುತ್ತಾ ಬಂದೆವು. ವಚನಶಾಸ್ತ್ರ ಮತ್ತು ತತ್ವಜ್ಞಾನದ
ಅಧ್ಯಯನಕ್ಕೆ ಅವಕಾಶ ಕಲ್ಪಿಸಿದೆವು.

ಆದರೆ ದುರಾದೃಷ್ಟ ; ಊಹೆಗೂ ನಿಲುಕದಂತಹ ಪ್ರತಿಕ್ರಿಯೆಯನ್ನು ನಾವು
ಗಮನಿಸಿದೆವು. ಸ್ವಾಮಿಗಳು ನಮ್ಮ ಯಾವ ಮಾತುಗಳಿಗೂ ಬೆಲೆ ಕೊಡಲಿಲ್ಲ.
ಅಧ್ಯಯನವಿರಲಿ, ಅನುಷ್ಠಾನವಿರಲಿ ಅಶ್ರದ್ಧೆಯನ್ನೇ ತೋರತೊಡಗಿದರು. ಆದರೂ
ನಾವು ಮತ್ತೆ ಮತ್ತೆ ಅವರಿಗೆ ಬುದ್ಧಿ ಹೇಳಿದೆವು. ಭಕ್ತರೂ ಅನೇಕಬಾರಿ ವಿನಯ
ದಿಂದ ಅರಿಕೆಮಾಡಿಕೊಂಡರು. ಆದರೆ ಎಲ್ಲವೂ ನಿಷ್ಫಲವಾಯಿತು. ಆಶ್ಚರ್ಯದ
ಸಂಗತಿಯೆಂದರೆ, ಅವರು ಮಠದ ವ್ಯವಹಾರದ ಬಗ್ಗೆ ತಮಗೆ ಹೆಚ್ಚಿನ ಅಧಿಕಾರ
ಬೇಕೆಂದು ಬಯಸತೊಡಗಿದ್ದು. ಆ ಮಧ್ಯೆ ಕಿರಿಯ ಗುರುಗಳ ವೈಯಕ್ತಿಕ
ನಡವಳಿಕೆಯ ಬಗೆಗೆ ಕೆಲವು ಮಾತುಗಳು ಕೇಳಿ ಬರುತ್ತಿದ್ದವು. ನಾವು ಆ ಮಾತು
ಗಳಿಗೆ ಲಕ್ಷ್ಯಕೊಡದೆ, ಅವರನ್ನು ಸುಧಾರಿಸಲು ಮತ್ತೆ ಪ್ರಯತ್ನಿಸಿದೆವು. ಆ ಪರಿಸ್ಥಿತಿ
ಯಲ್ಲಿ, ಇಷ್ಟು ಬೃಹತ್ತಾಗಿ ಬೆಳೆದ ಮಠದ ಗುರುತರ ಜವಾಬ್ದಾರಿಯನ್ನು ಅವರಿಗೆ
ವಹಿಸಲು ಸಹಜವಾಗಿಯೇ ನಮಗೆ ಧೈರ್ಯವಿಲ್ಲವಾಯಿತು. ಕೆಲವು ಕಾಲ ಕಳೆದರೆ
ಪರಿಸ್ಥಿತಿ ಸುಧಾರಿಸಬಹುದೆಂಬ ನಿರೀಕ್ಷೆಯಿಂದ ಅನಿವಾರ್ಯವಾಗಿ ಮಠದ ಕಾರ್ಯ
ನಿರ್ವಹಣೆಯನ್ನು ನಾವೇ ನೋಡಿಕೊಂಡು ಬರಬೇಕಾಯಿತು.

## ಅಹಿತಕರ ಘಟನೆ

ಮಠದ ಏಳಿಗೆ ಮತ್ತು ಕೀರ್ತಿಯನ್ನು ಸಹಿಸದ ಕೆಲವು ಶಕ್ತಿಗಳು ಇದನ್ನೇ
ನೆಪಮಾಡಿಕೊಂಡು 1985 ರ ನವೆಂಬರ್ 28, 29 ಮತ್ತು 30 ರಂದು ಮಠದ
ಆವರಣದಲ್ಲಿ ಗಲಭೆಯೆಬ್ಬಿಸಿದವು. ಆಗ ಸರ್ಕಾರದವರು ಸೂಕ್ತ ಜಾಗ್ರತೆ ವಹಿಸಿ
ಪರಿಸ್ಥಿತಿಯನ್ನು ಶಮನಗೊಳಿಸಿದುದು ಒಂದು ಸಮಾಧಾನದ ಸಂಗತಿ. ಆದರೂ ಆಗ
ನಡೆದ ಘಟನೆಗಳನ್ನು ಕುರಿತು ವರದಿಮಾಡುವಾಗ ಕೆಲವು ಪತ್ರಿಕೆಗಳು ಸಾರ್ವಜನಿಕ
ರಲ್ಲಿ ಮಠದ ಬಗ್ಗೆ ತಪ್ಪುಕಲ್ಪನೆಯುಂಟಾಗುವಂತೆ ಮಾಡಿದವು. ಪತ್ರಿಕಾ ವರದಿ
ಗಾರರು ಆಗ ನಮ್ಮನ್ನು ನೇರವಾಗಿ ಸಂಪರ್ಕಿಸಿದ್ದರೆ ಸತ್ಯಾಂಶವನ್ನು ತಿಳಿದು ಪ್ರಕಟಿಸ
ಬಹುದಾಗಿತ್ತು. ಆದರೂ ಹೆಚ್ಚಿನ ಗೊಂದಲವುಂಟಾಗಬಾರದೆಂದು ಮಠದ ಸಾತ್ವಿಕ
ಪರಂಪರೆಯ ಹಿತದೃಷ್ಟಿಯಿಂದ ನಾವು ಆಗ ಮೌನ ವಹಿಸುವುದು ಅನಿವಾರ್ಯ



ವಾಯಿತು. ನಾವು ವಹಿಸಿದ ಮೌನ ಮತ್ತು ತಾಳಿದ ಶಾಂತಿಗಳನ್ನು ಅನ್ಯಥಾ
ಭಾವಿಸಿರುವ ಕೆಲವರು ಮಠದ ಬಗ್ಗೆ ತಮ್ಮ ಅಪಪ್ರಚಾರವನ್ನು ಒಂದೇ ಸಮನೆ
ಮುಂದುವರೆಸಿದಂತೆ ಕಾಣುತ್ತದೆ.

ಮಠಕ್ಕಾಗಿ ದುಡಿದ ಅನೇಕ ವ್ಯಕ್ತಿಗಳ ಹೆಸರನ್ನು ಕೆಲವು ಪತ್ರಿಕೆಗಳು ತಪ್ಪು
ಅರ್ಥ ಕಲ್ಪಿಸಿ ಬಳಸಿರುವುದನ್ನು ಮತ್ತು ಮಠದ ಚಟುವಟಿಕೆಗಳು ಹಾಗೂ
ವೈಯಕ್ತಿಕವಾಗಿ ನಮ್ಮ ಮೇಲೂ ಸಹ ಅತ್ಯಂತ ಹಗುರವಾಗಿ ಸಭ್ಯತೆಗೆ ದೂರವಾಗಿ
ಬರೆದಿರುವುದನ್ನು ನಾವು ಗಮನಿಸಿದ್ದೇವೆ. ಇದು ಪತ್ರಿಕಾ ಧರ್ಮದ ಘನತೆ ಗೌರವ
ಗಳಿಗೆ ಒಪ್ಪುವಂತಹುದಲ್ಲ. ಇಂತಹ ಆಧಾರವಿಲ್ಲದ ಆರೋಪಗಳ ಮೂಲಕ ನಮ್ಮ
55 ವರ್ಷಗಳ ಸಾರ್ವಜನಿಕ ಸೇವೆಗೆ ಕಳಂಕದ ಕೆಸರು ಚೆಲ್ಲುವುದು ಸಾಧುವಲ್ಲ;
ಸಾಧ್ಯವೂ ಅಲ್ಲ. ಇದರ ಜೊತೆಗೆ, ಮಠದಲ್ಲಿ ಸ್ವಾರ್ಥಸಾಧನೆಯಾಗದ ಕೆಲವು
ವ್ಯಕ್ತಿಗಳು ಮಠದ ವಿರುದ್ಧ ಮತ್ತು ವೈಯಕ್ತಿಕವಾಗಿ ನಮ್ಮ ವಿರುದ್ಧ ಪ್ರತ್ಯೇಕವಾಗಿ
ಲೆಕ್ಕವಿಲ್ಲದಷ್ಟು ಕರಪತ್ರಗಳನ್ನು ಹೊರಡಿಸಿದ್ದಾರೆ. ಈ ಕರಪತ್ರಗಳಲ್ಲಿ ಬಳಸಿರುವ
ಭಾಷೆಯ ಬಗ್ಗೆ ಹೇಳದಿರುವುದೇ ಮೇಲೆಂದು ಕಾಣುತ್ತದೆ.

'ಮಠದ ಹಣ ದುರುಪಯೋಗವಾಗುತ್ತಿದೆ', 'ಮಠ ದುಷ್ಟರ ಮತ್ತು ಪಟ್ಟ
ಭದ್ರ ಹಿತಾಸಕ್ತರ ಕಪಿಮುಷ್ಟಿಯಲ್ಲಿದೆ', 'ಕೆಲವು ಉದ್ಯಮಿಗಳು ಮಠದಿಂದ ಲಕ್ಷಾಂತರ
ಹಣ ಪಡೆದಿದ್ದಾರೆ,' 'ಹಿರಿಯ ಗುರುಗಳಿಗೆ ಅಧಿಕಾರದ ಲಾಲಸೆ', 'ಧರ್ಮದ ಹೆಸರಿನಲ್ಲಿ
ಮೋಸ ನಡೆಯುತ್ತಿದೆ'—ಇತ್ಯಾದಿಯಾಗಿ ಅನೇಕ ರೀತಿಯಲ್ಲಿ ಅಪಪ್ರಚಾರ ನಡೆದಿದೆ.
ಈ ಬಗ್ಗೆ ಮಠದ ಭಕ್ತರಿಗೆ ನಾವು ತಿಳಿಸುವುದಿಷ್ಟೆ—ಇದಾವುದೂ ಸತ್ಯವಲ್ಲ. ಮಠದ
ಹಣಕಾಸು ಮತ್ತಿತರ ಯಾವುದೇ ವ್ಯವಹಾರದಲ್ಲಿ ಎಲ್ಲೂ ದುರುಪಯೋಗವಾಗಲು
ನಾವು ಅವಕಾಶ ಕೊಟ್ಟಿಲ್ಲ. ಸಂಸ್ಥೆಯ ಹಿತದೃಷ್ಟಿಯಿಂದ ಕೆಲವರಿಗೆ ಅನಿವಾರ್ಯ
ಪರಿಸ್ಥಿತಿಯಲ್ಲಿ ಅಲ್ಪಸ್ವಲ್ಪ ಸಹಾಯ ಮಾಡಿರಬಹುದು. ತುಮಕೂರು ವರ್ತಕರಿಗೆ
ಮತ್ತು ಕೈಗಾರಿಕೋದ್ಯಮಿಗಳಿಗೆ ಲಕ್ಷಗಟ್ಟಲೆ ಹಣ ಕೊಟ್ಟಿರುವ ಮಾತಿನಲ್ಲಿ ಎಳ್ಳಷ್ಟೂ
ಸತ್ಯಾಂಶವಿಲ್ಲ.

ಕಳೆದ ನಾಲ್ಕು ವರ್ಷಗಳಿಂದ ಉಂಟಾಗಿರುವ ಅಭಾವ ಪರಿಸ್ಥಿತಿಯಲ್ಲಿ ದಿನ
ನಿತ್ಯದ ವೆಚ್ಚಕ್ಕೇ ಭಿಕ್ಷಾಟನೆಮಾಡಿ ತರಬೇಕಾಗಿರುವಾಗ ಬೇರೆಯವರಿಗೆ ಹಣ
ಕೊಡಲು ಹೇಗೆ ಸಾಧ್ಯವಾದೀತು ? ಒಂದು ವೇಳೆ ಕೊಟ್ಟಿದ್ದರೂ ಕೆಲವು ಬಡ
ವಿದ್ಯಾರ್ಥಿಗಳಿಗೆ ಅಷ್ಟಿಷ್ಟು ಸಹಾಯ ಮಾಡಿರಬಹುದು. ಉಳಿದಂತೆ ಮಠದ ಎಲ್ಲಾ
ಜಮಾ-ಖರ್ಚುಗಳಿಗೂ ಅಧಿಕೃತವಾದ ಲೆಕ್ಕಪತ್ರಗಳನ್ನು ಇಡಲಾಗಿದೆ.

ಕೆಲವು ಮಂದಿ ಶಿಕ್ಷಕರು ಮಠದ ಹಣವನ್ನು ಲೂಟಿಮಾಡುತ್ತಿದ್ದಾರೆ, ಮಠದ
ಚರ 'ಆಸ್ತಿ ಪಾಸ್ತಿಗಳನ್ನು ಕಳವು ಮಾಡುತ್ತಿದ್ದಾರೆ' ಎಂಬ ಅಪಪ್ರಚಾರದ ಮಾತು

ಗಳು ಕೇಳಿ ಬಂದಿವೆ. ಇದಾವುದೂ ಸತ್ಯಾಂಶವಲ್ಲ. ಶ್ರೀ ಮಠದಲ್ಲಿರುವ ಶಿಕ್ಷಕರು ತಮ್ಮ ನಿಸ್ವಾರ್ಥ ಸೇವೆಯನ್ನು ಸಲ್ಲಿಸಿದ್ದರಿಂದಲೇ ಸಂಸ್ಥೆ ಇಷ್ಟೊಂದು ಬೃಹತ್ತಾಗಿ ಬೆಳೆಯಲು ಸಾಧ್ಯವಾಯಿತೆಂಬುದನ್ನು ಗಮನಿಸಬೇಕು. ಮಠದ ಪಾವಿತ್ರ್ಯತೆಯನ್ನೂ, ಶುದ್ಧ ಪರಂಪರೆಯನ್ನೂ ರಕ್ಷಿಸಿಕೊಂಡು ಬರುವಲ್ಲಿ ಅವರೆಂದೂ ತಪ್ಪಿ ನಡೆದುದು ಕಂಡು ಬಂದಿಲ್ಲ. ಪವಿತ್ರ ಪರಂಪರೆಯು ಉಳಿದು ಬೆಳಗಬೇಕೆಂಬುದೇ ಅವರ ಉತ್ಕಟಾಕಾಂಕ್ಷೆಯಾಗಿದೆ.

### ಈಗೇಕೆ ಇಂತಹ ಅಪವಾದ?

ಸಿದ್ಧಗಂಗಾ ಮಠವು ವಾಣಿಜ್ಯ ಅಥವಾ ವ್ಯವಹಾರದ ಸಂಸ್ಥೆಯಲ್ಲ; ಸಾರ್ವಜನಿಕ ಸೇವಾಸಂಸ್ಥೆ. ಹಿಂದೆಂದೂ ಕೇಳಿಬರದ ಈ ಅಪವಾದಗಳು ಈಗೇಕೆ ಕೇಳಿಬರಬೇಕು? ಇದಕ್ಕೆ ಕಾರಣವಿಲ್ಲದಿಲ್ಲ. ಮಠದ ಸಂಸ್ಥೆಗಳು ಬೆಳೆಯುತ್ತಾ ಹೋದಂತೆ ನಮ್ಮಲ್ಲಿ ಉದ್ಯೋಗ ಕೇಳಿಕೊಂಡು, ನಾನಾ ಬಗೆಯ ಸೌಲಭ್ಯ ಕೇಳಿಕೊಂಡು ಬರುವವರ ಸಂಖ್ಯೆಯೂ ಹೆಚ್ಚಾಗತೊಡಗಿದೆ. ಬಂದವರ ಕೇಳಿಕೆಗಳನ್ನೆಲ್ಲ ಈಡೇರಿಸುವುದು ಕಷ್ಟದ ಮಾತು. ಅಂತೇ ತಮ್ಮ ಸ್ವಾರ್ಥ ಈಡೇರದ ಕೆಲವರು ಅತೃಪ್ತರಾಗಿದ್ದಾರೆ. ಇವರ ಜೊತೆಗೆ ಸಂಸ್ಥೆಯಲ್ಲೇ ಇದ್ದು, ತಪ್ಪುಮಾಡಿದ ಕಾರಣ ಶಿಕ್ಷೆಗೊಳಗಾದ ಕೆಲವು ಅತೃಪ್ತ ನೌಕರರೂ ಸೇರಿಕೊಂಡಿದ್ದಾರೆ. ಇವರೆಲ್ಲ ಸೇರಿ ಶ್ರೀ ಗೌರಿಶಂಕರ ಸ್ವಾಮಿಗಳಲ್ಲೂ ಅತೃಪ್ತಿಯ ಹೊಗೆಯಾಡಿಸಿದ್ದಾರೆ. ಹೀಗಾಗಿ ಮಠದ ವಿರುದ್ಧ ಒಂದೇ ಸಮನೆ ಅಪಪ್ರಚಾರ ನಡೆಯುತ್ತಿದೆ.

ಈ ಮಧ್ಯೆ ಕಿರಿಯಸ್ವಾಮಿಗಳ ವಿಷಯದಲ್ಲಿ ಅನೇಕ ದೂರುಗಳು ಬಂದಿರುವುದೂ ನಿಜ. ಆರಂಭದಲ್ಲಿ ನಾವು ಅಲಕ್ಷ್ಯ ಮಾಡಿದರೂ, ಈಚಿನ ಅವರ ರೀತಿನೀತಿಗಳನ್ನು ಸೂಕ್ಷ್ಮವಾಗಿ ಗಮನಿಸಿರುವ ನಮಗೆ ಆ ದೂರುಗಳಲ್ಲಿ ಸತ್ಯಾಂಶ ಕಂಡು ಬಂದಿವೆ. ಅವರಲ್ಲಿ ಮಠದ ಘನತೆ ಗೌರವಗಳಿಗೆ ಕುಂದು ತರುವಂತಹ ಯಾವುದೇ ನೀತಿ-ನಡವಳಿಕೆಗಳು ಇರಬಾರದೆಂಬುದೇ ನಮ್ಮ ಅಪೇಕ್ಷೆಯಾಗಿತ್ತು. ಆದರೆ ಕೆಲವು ಸನ್ನಿವೇಶಗಳನ್ನು ಗಮನಿಸಿದಾಗ ನಮಗೆ ಅತ್ಯಂತ ನೋವುಂಟಾಗಿದೆ.

ಈ ಎಲ್ಲ ಪ್ರಕರಣಗಳಿಂದಾಗಿ ಮಠದ ಆವರಣದಲ್ಲಿ ಉಂಟಾಗಿರುವ ಮತ್ತೊಂದು ಅಪಾಯಕಾರಿ ಬೆಳವಣಿಗೆ ಎಂದರೆ, ಮುಗ್ಧ ಶಾಲಾ ಮಕ್ಕಳಲ್ಲಿ ಜಾತಿ-ಒಳಜಾತಿಗಳ ವಿಷದ ಬೀಜ ಬಿತ್ತಿ ಅವರನ್ನು ಗಲಭೆಗಳಿಗೆ ಬಳಸಿಕೊಳ್ಳುತ್ತಿರುವುದು. ಇದು ನಿಜಕ್ಕೂ ಆತಂಕಕಾರಿ. ಐದಾರು ದಶಕಗಳಿಂದ, ಗ್ರಾಮೀಣ ಮಕ್ಕಳು ನಿಶ್ಚಿಂತರಾಗಿ ಅಭ್ಯಾಸ ಮಾಡಿಕೊಂಡು ಬರುತ್ತಿದ್ದ ಪ್ರಶಾಂತ ವಾತಾವರಣದಲ್ಲಿ ಉದ್ವೇಗ ಮತ್ತು ವಿದ್ವೇಷಗಳ ಪ್ರಕ್ಷುಬ್ಧತೆಯನ್ನುಂಟುಮಾಡುವುದು ಸಭ್ಯತೆಯ ಲಕ್ಷಣವಲ್ಲ. ಆದ್ದರಿಂದ ಅಂತಹ ದುಷ್ಟಶಕ್ತಿಗಳ ಬಗ್ಗೆ ಮಕ್ಕಳ ಪಾಲಕರು ಮತ್ತು ಪೋಷಕರು ಎಚ್ಚರ



ವಹಿಸಬೇಕಾಗಿದೆ. ಸಹಸ್ರಾರು ಮಕ್ಕಳು ಅಭ್ಯಾಸ ಮಾಡುತ್ತಿರುವ ಕಡೆ ಕೇಡಿಗಳು ಗಲಭೆಯನ್ನೆಬ್ಬಿಸಿದರೆ ಅಮಾಯಕ ಮಕ್ಕಳ ಗತಿಯೇನು ? ಅಂತಹ ಸಂದರ್ಭಗಳಲ್ಲಿ ಅಷ್ಟೊಂದು ಮಕ್ಕಳಿಗೆ ರಕ್ಷಣೆ ನೀಡುವುದಾದರೂ ಹೇಗೆ ? ಅವರಿಂದ ಮಕ್ಕಳಿಗೆ ಏನಾದರೂ ಪೆಟ್ಟು ಬಿದ್ದರೆ ಹೆತ್ತ ತಂದೆ ತಾಯಿಗಳಿಗೆ ಎಷ್ಟು ನೋವಾದೀತು ? ಅವರ ವಿದ್ಯಾಭ್ಯಾಸ ಹಾಳಾದರೆ ಬಡ ತಂದೆ ತಾಯಿಗಳ ಗತಿ ಏನು ? ಇವೆಲ್ಲವನ್ನೂ ಸಾರ್ವಜನಿಕರು ಗಮನಿಸಬೇಕಾಗುತ್ತದೆ.

### ಕೊನೆಯ ಮಾತು

ಇಷ್ಟಾದರೂ ನಾವು ಆಶಾವಾದಿಗಳಾಗಿದ್ದೇವೆ. ನಮ್ಮ ಹಿರಿಯ ಗುರುಗಳ ಆಶೀರ್ವಾದ ರಕ್ಷೆ ಈಗ ಮಠಕ್ಕೆ ಒದಗಿರುವ ವಿಪತ್ತನ್ನು ಪರಿಹರಿಸುವುದೆಂಬ ವಿಶ್ವಾಸ ನಮಗಿದೆ. ಮಠದಲ್ಲಿ ಇದುವರೆಗೆ ನಡೆದಿರುವ ಪ್ರತಿಯೊಂದು ಘಟನೆಯ ಕಾರಣ ಮತ್ತು ಪರಿಹಾರಗಳನ್ನು ಅತ್ಯಂತ ಸೂಕ್ಷ್ಮವಾಗಿ ನಾವು ಗಮನಿಸಿದ್ದೇವೆ. ಗೌರೀಶಂಕರ ಸ್ವಾಮಿಗಳು ನಮ್ಮ ನಿರೀಕ್ಷೆಗೆ ತಕ್ಕಂತೆ ಅಧ್ಯಯನ ಅನುಷ್ಠಾನದಲ್ಲಿ ಸಿದ್ಧಿ ಪಡೆದಿದ್ದರೆ ಬಹುಶಃ ಈ ಯಾವ ಅನಿಷ್ಟಗಳೂ ತಲೆದೋರುತ್ತಿರಲಿಲ್ಲ. ಅವರು ತಮಗರಿವಿಲ್ಲದಂತೆಯೇ ದುಷ್ಟಶಕ್ತಿಗಳ ಹಿಡಿತಕ್ಕೆ ಸಿಕ್ಕಿಕೊಂಡಿದ್ದಾರೆ. ಅವರನ್ನು ಸುಧಾರಿಸಬೇಕೆಂಬ ಆಶಯದಿಂದ ಹಲವಾರು ಪ್ರಯತ್ನಗಳನ್ನು ಮಾಡಿಯೂ ವಿಫಲವಾಗಬೇಕಾಯಿತು. ಸುಧಾರಿಸಲಾಗದಂತಹ ಪರಿಸ್ಥಿತಿಯುಂಟಾಗಿರುವುದೇ ಇಂದು ತಲೆದೋರಿರುವ ಸಮಸ್ಯೆ ಮತ್ತು ಈ ಎಲ್ಲ ಕಹಿ ವಾತಾವರಣವುಂಟಾಗಲು ಕಾರಣ.

ವೀರಶೈವ ಧರ್ಮ ಮತ್ತು ಸಂಸ್ಕೃತಿಗಳ ಸತ್ಪರಂಪರೆಯನ್ನು ರಕ್ಷಿಸಿಕೊಂಡು ಬಂದ ಶ್ರೀ ಸಿದ್ಧಗಂಗಾ ಮಠಕ್ಕೆ ಯಾವುದೇ ಕಳಂಕ ತಟ್ಟದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬರ ಕರ್ತವ್ಯ. ಇಂದಿನ ಪರಿಸ್ಥಿತಿ ಸಮಾಜ ಸಂಘಟನೆಯ ದೃಷ್ಟಿಯಿಂದ ಯಾರಿಗೂ ಗೌರವ ತರುವಂತಿಲ್ಲ. ಇದನ್ನು ಮಹಾಜನತೆ ಗಂಭೀರವಾಗಿ ವಿಚಾರ ಮಾಡಬೇಕು. ಇಲ್ಲಿ ಯಾವುದೇ ಒಂದು ವ್ಯಕ್ತಿಗಿಂತ ಮಠದ ಪರಂಪರೆ ಮತ್ತು ಸಹಸ್ರಾರು ಬಡಮಕ್ಕಳ ಹಿತರಕ್ಷಣೆ ಮುಖ್ಯವಾದುದು. ನಾವು ಕಳೆದ 55 ವರ್ಷಗಳ ಕಾಲ ಹಂತ ಹಂತವಾಗಿ ಕಟ್ಟಿ ಬೆಳೆಸಿದ ಈ ಧರ್ಮಸೌಧ ಕಳಚಿ ಬೀಳದಂತೆ ನೋಡಿಕೊಳ್ಳಬೇಕಾದುದು ಭಕ್ತರ ಕರ್ತವ್ಯ.

ನಾವಂತೂ ಈ ಬಗೆಗೆ ತುಂಬ ಚಿಂತೆಗೊಳಗಾಗಿದ್ದೇವೆ. ಸಮಸ್ಯೆಯ ಪರಿಹಾರಕ್ಕಾಗಿ ಮಾರ್ಗ ಕಂಡುಕೊಳ್ಳಬೇಕಾಗಿದೆ. ಈ ಮಧ್ಯೆ "ಹಿರಿಯ ಸ್ವಾಮಿಗಳು ಕಿರಿಯ ಸ್ವಾಮಿಗಳಿಗೆ ಏಕೆ ಎಲ್ಲ ಅಧಿಕಾರಗಳನ್ನು ಬಿಟ್ಟುಕೊಡಬಾರದು ?" ಎಂಬ ಮಾತು ಬಹಳವಾಗಿ ಕೇಳಿಬರುತ್ತಿದೆ. ಮಠಗಳಲ್ಲಿ ಮುಖ್ಯವಾಗುವುದು ಅಧಿಕಾರ

ವಲ್ಲ; ಶೀಲ ಮತ್ತು ಸೇವೆ. ಅಂತಹ ಶೀಲ ಮತ್ತು ಸೇವೆಗಳಿಂದಲೇ ಅಧಿಕಾರ ಲಭಿಸುವುದು. ನಾವು ನಮ್ಮ ಹಿರಿಯ ಗುರುಗಳ ಆಜ್ಞೆಗನುಗುಣವಾಗಿ ನಮ್ಮ ಕೊನೆಯ ಉಸಿರಿನವರೆಗೆ ಮಠದ ಸೇವೆ ಸಲ್ಲಿಸುವುದು ನಮ್ಮ ಕರ್ತವ್ಯವಾಗಿದೆ. ಅದೇ ನಮಗೆ ಲಿಂಗಪೂಜೆ. ಈಗ ಕೇಳಿಬರುತ್ತಿರುವ ಮಾತುಗಳಿಂದ ನಮಗೆ ಅತೀವ ನೋವುಂಟಾಗಿದೆ. ಮಠದ ಸೇವೆಯನ್ನು ಅಧಿಕಾರವೆಂದು ನಾವೆಂದೂ ಭಾವಿಸಿಲ್ಲ. ಆದರೆ ನಮಗಿರುವ ವ್ಯಥೆ ಈಗಿರುವ ಪರಿಸ್ಥಿತಿ.

ಒಟ್ಟಾರೆ, ಸಿದ್ಧಗಂಗಾ ಮಠದ ಭಕ್ತರು ಈ ಸಂದರ್ಭದಲ್ಲಿ ಯಾವುದೇ ಉದ್ವೇಗಕ್ಕೆ ಒಳಗಾಗಬಾರದು. ಮಠದ ಪರಂಪರೆಯ ಪಾವಿತ್ರ್ಯವನ್ನು ರಕ್ಷಿಸಲು ಸೂಕ್ತವಾದ ಪರಿಹಾರ ಮಾರ್ಗ ಕಂಡುಕೊಳ್ಳಲಾಗುತ್ತದೆ. ಅಪಪ್ರಚಾರಗಳಿಗೆ ಮನಗೊಡದೆ ಸಮಸ್ಯೆಯ ಪರಿಹಾರಕ್ಕೆ ಪ್ರತಿಯೊಬ್ಬರೂ ನೆರವಾಗಬೇಕು. ಈ ಮಧ್ಯೆ ಮಠದ ಅಭಿಮಾನಿಗಳು, ಹಿತರಕ್ಷಣಾ ಸಮಿತಿ ಮೊದಲಾದ ಹೆಸರುಗಳಲ್ಲಿ ಮಠದ ಪರವಾಗಿ ಮತ್ತು ವಿರೋಧವಾಗಿ ಕೆಲವು ಪ್ರಕಟಣೆಗಳು ಹೊರಬಂದಿರುವುದನ್ನೂ ನಾವು ನೋಡಿದ್ದೇವೆ. ಇದಾವುದೂ ಸೂಕ್ತವಲ್ಲವೆಂದು ನಮ್ಮ ಭಾವನೆ.

ಮಠದ ಪರಂಪರೆಯನ್ನು ಗಮನದಲ್ಲಿಟ್ಟುಕೊಂಡು ನಾವು ಸೂಕ್ತ ಸಮಯದಲ್ಲಿ ಧರ್ಮಸಮ್ಮತವಾದ ನಿರ್ಧಾರವನ್ನು ಪ್ರಕಟಿಸುತ್ತೇವೆ. ಇಂತಹ ಸೂಕ್ಷ್ಮ ವಿಷಯಗಳಲ್ಲಿ ಸಹನೆ ಅತ್ಯಂತ ಅಗತ್ಯ. ಎಲ್ಲವೂ ಸುಗಮವಾಗಿ ಅಂತ್ಯಗೊಳ್ಳಬೇಕೆಂಬುದೇ ನಮ್ಮ ಇಚ್ಛೆ.

(ಶ್ರೀ ಶಿವಕುಮಾರ ಸ್ವಾಮಿಗಳು)

ಎಸ್.ಜೆ.ಎಂ. ಮುದ್ರಣ (ಪ್ರೈ.) ಲಿಮಿಟೆಡ್ ಬಿ-27 ಫೋನ್ : 226469


# ಸಿದ್ಧಗಂಗಾ

ಸಂಪುಟ-೨೨ ಸಂಚಿಕೆ-೧೦ ಅಕ್ಟೋಬರ್, ೧೯೮೬


## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧ

ಸೇವೆಯೆ ಶಿವಯೋಗ ಕಾಯಕವೆ ಶಿವಪೂಜೆ
ಶಿವನ ಕಾಣುವೆ ಗುರುವೆ ಭಕ್ತರಲಿ। ನನ್ನತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು ॥

* * *

ಕಾವಿ ಎಂಬುದು ಕಾಮವ ತೊರೆದದ್ದು
ದಿವ್ಯ ಜೀವನಕೆ ತೆರೆದದ್ದು । ಎಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಮುಂಡೆ ಬೋಳಾದಡೆ ಬಂದದ್ದು ಏನಂದೆ
ಮನವು ಬೋಳಾಗ ಬೇಕೆಂದೆ।ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ


ಲೇಖನದ ಹೆಸರು ಲೇಖಕರ ಹೆಸರು ಪುಟ

* ಶ್ರೀವಾಣಿ
5
* ಸಂಪಾದಕೀಯ
7
* ಮಾಣಿಕ್ಯ ದೀಪ್ತಿ
—ಹೆಚ್. ಎಸ್. ಸಿದ್ಧಗಂಗಪ್ಪ 9
* ಬಸವ ಪ್ರತಿಜ್ಞಾ
—ಟಿ. ಎನ್. ಮಹಾದೇವಯ್ಯ 11
* ಶೋಷಣೆಯೇ ನಿನ್ನ ಹೆಸರು ಮಹಿಳೆ
ಡಾ|| ಸಿ. ಅಶ್ವತ್ಥ್ 15
* ಏಕಾದಶಿ ವ್ರತ ವಿಜ್ಞಾನ
—ಶ್ರೀ ಅನಂತಚಿಂತಾಮಣಿಜ್ಯೋತಿಷಿ 17
* ತಳಿರು ತೋರಣ [ಧಾರವಾಹಿ-೧೨]
ಎನ್. ಎಸ್. ಗದಗಕರ 21
* ಪುಣ್ಯಕ್ಷೇತ್ರಗಳು–2 ಕೂಡಲಸಂಗಮ
—ಪಂಡಿತ ಕೆ. ಪಿ. ಶಿವಲಿಂಗಯ್ಯ 25
* ಬಸವರಸರ ಲೀಲೆಗಳು
—ಹೆಚ್. ಜಿ. ರಾಧಾದೇವಿ 27
* ವಚನಕಾರ ಸೊಡ್ಡಳಬಾಚರಸ —ಪ್ರೊ. ಎಸ್. ಎಸ್. ಭೂಸರೆಡ್ಡಿ 32
* ಪ್ರೇಮದಲ್ಲಿ ಆತ್ಮನ ನಿರಂತರ ಸ್ವಾತಂತ್ರ್ಯವಿದೆ
* ಸಾಮಜಪದ ಮಹಿಮೆ —ಜೆ. ಶಾರದಾರಾಜಶೇಖರ್ 39
—ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ 43
* ಗ್ರಾಮಾಂತರ ಬಸವಜಯಂತಿ
—ಹೆಚ್. ವಿ. ವೀರಭದ್ರಯ್ಯ 47






## ಶ್ರೀವಾಣಿ



### ಕಾಯಕ ತತ್ವ.

ಕಾಯಕ ತತ್ವವು ಮಾನಸಿಕ ನೈರ್ಮಲ್ಯ ಹಾಗೂ ಸಿದ್ಧತೆ ಇವುಗಳನ್ನು ಒದಗಿಸಿ ಕೊಡುತ್ತದೆ. ನಿರುದ್ಯೋಗಿಯ ಮನಸ್ಸು ವಂಚನೆಯ ವ್ಯವಹಾರದಲ್ಲಿ, ಕುತ್ಸಿತ ಆಲೋಚನೆಗಳಲ್ಲಿ ತೊಡಗುವುದು, ಮನಸ್ಸು ಸ್ವಾಭಾವಿಕವಾಗಿ ಚಂಚಲವಾಗುತ್ತದೆ. ಅದನ್ನು ಬಂಧಿಸುವುದು ಅತಿ ದುಸ್ತರವಾದ ಕಾರ್ಯ. ಆದರೆ ಒಂದು ಮಾರ್ಗದಲ್ಲಿ ಪ್ರವಹಿಸುತ್ತಿರುವ ಅದರ ಗಮನವನ್ನು ಪ್ರಯತ್ನದಿಂದ ತೊಡೆದು ಮತ್ತೊಂದು ಮಾರ್ಗದಲ್ಲಿ ಹೋಗುವಂತೆ ಮಾಡುವುದು ಅಷ್ಟೇ ಕಷ್ಟವಲ್ಲ. ಸಾಮಾನ್ಯವಾಗಿ ಹೀನ ವಿಚಾರಗಳಲ್ಲಿ ಕುತ್ಸಿತ ಆಲೋಚನೆಗಳಲ್ಲಿಯೇ ಮನವು ಪ್ರವೃತ್ತವಾಗುವುದು. ಈ ವಿಧವಾದ ಅದರ ದುಷ್ಟ ಪ್ರವೃತ್ತಿಯನ್ನು ತಡೆದು, ಸದ್ವಿಚಾರಗಳಲ್ಲಿ ಹಾಗೂ ಸದಾಲೋಚನೆಗಳಲ್ಲಿ ಪ್ರವೃತಿಯುಂಟಾಗುವಂತೆ ಮಾಡಬೇಕಾದುದು ಮನುಷ್ಯನ ಕರ್ತವ್ಯ. ಕಾಯಕವು ಮನಸ್ಸನ್ನು ಉದ್ಯೋಗ ಶೀಲವನ್ನಾಗಿ ಮಾಡುತ್ತದೆ. ಕಾಯಕ ಮಾಡುವಾಗ ಪ್ರಾಮಾಣಿಕತೆ ಮತ್ತು ಮನಸ್ಥೈರ್ಯ ಇವು ಬಹಳ ಅವಶ್ಯಕ. ಪ್ರಾಮಾಣಿಕತೆಯಿಂದ ಮನಸ್ಸು ಪವಿತ್ರವಾಗುತ್ತದೆ. ಅಲ್ಲದೆ ಒಂದು ವಿಧವಾದ ಅಸಾಧಾರಣ ಶಕ್ತಿಯುಂಟಾಗುತ್ತದೆ. ಬೇಸಾಯಗಾರರು ಉದ್ಯೋಗವನ್ನು ಮಾಡುತ್ತಿರುವಾಗ ಮನಸ್ಸನ್ನು ಚಲಿಸಗೊಡದೆ ಏಕಾಗ್ರತೆಯಿಂದ ಅದನ್ನು ಸಾಗಿಸುತ್ತಿರಬೇಕು. ತಾನುಮಾಡುತ್ತಲ್ಕ ಉದ್ಯೋಗದಲ್ಲಿ ಮನಸ್ಸು ಲೀನವಾಗಿಬೇಕು. ಧ್ಯಾನ ನಿರತನಾದ ಯೋಗಿಯು ಹೇಗೆ ಪರಮಾತ್ಮನಲ್ಲಿ ನಿಶ್ಚಲ ಭಾವವನ್ನಿಟ್ಟು ಅನ್ಯ ವಸ್ತುಗಳ ಪರಿವೇಯಿಲ್ಲದಿರುವನೋ ಹಾಗೆಯೇ ಕಾಯಕದಲ್ಲಿ ಶರಣನು ತದೇಕ ಚಿತ್ತನಿರನಾಗಿ ಅನ್ಯಗೊಡವೆಯಿಲ್ಲದಿರುವನು. ಕಾಯಕದಲ್ಲಿ ಚಿತ್ತೈಕಾಗ್ರತೆಯು ಹೇಗಿರಬೇಕೆಂಬುದನ್ನು ಶರಣರು:

"ಕಾಯಕದಲ್ಲಿ ಗುರುದರ್ಶನವನ್ನಾದರೂ ಮರೆಯಬೇಕು, ಕಾಯಕದಲ್ಲಿ ನಿರತನಾದೆಡೆ ಲಿಂಗ ಪೂಜೆಯನ್ನಾದರೂ ಮರೆಯಬೇಕು, ಜಂಗಮ ಮಾಡಿದ್ದರೂ ಹಂಗು ಹರಿಯಬೇಕು ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವ ಲಿಂಗವಾಯಿತಾದ್ದರೂ ಕಾಯಕದೊಳಗೆ"– ಎನ್ನುವ ಈ ವಚನದಲ್ಲಿ ವ್ಯಕ್ತಪಡಿಸಿದ್ದಾರೆ,

ಹೀಗೆ ಉದ್ಯೋಗ ಮಾಡುತ್ತಿರುವವರಿಗೆ 'ನನಗೆ ತಿಳಿದ ಮಟ್ಟಿಗೆ ಮನಃಪೂರ್ವಕವಾಗಿ ಈ ಕೆಲಸ ಮಾಡಿದ್ದೇನೆ' ಎಂಬ ಸಮಾಧಾನ ಉಂಟಾಗುತ್ತದೆ. ಮನಸ್ಸಿನಲ್ಲಿ ಸಮಾಧಾನವು ಸಂಪುರ್ಣವಾಗಿ ನೆಲೆಗೊಂಡಾಗ ಉಂಟಾದ ಆನಂದವು ಅವರ್ಣನೀಯವಾಗಿದೆ. ಆಸಕ್ತಿಯಿಂದ ಕಾಯಕ ಮಾಡುವಾಗ ತಾನು ಮಾಡುವ ಕಾರ್ಯದಲ್ಲಿಯೇ ಒಂದು ಬಗೆಯ ಆನಂದ ಉಂಟಾಗುತ್ತದೆ. ಆ ಆನಂದದಿಂದ ಅವನು ಉದ್ಯೋಗದಲ್ಲಿ ಮತ್ತಷ್ಟು ನಿಷ್ಠಾವಂತನಾಗುತ್ತಾನೆ. ಭಾವನೆಯು ಬಲಿತ ಹಾಗೆಲ್ಲಾ, ಅವನ ಮನೋಶಕ್ತಿಯು ಅಲ್ಲಿಯೇ ಸಮರ್ಥ ಹೊಂದುತ್ತದೆ. ಯಾವುದೇ ವಿಧವಾದ ದುರಾಲೋಚನೆ ದವ್ಯಾಪಾರಗಳಲ್ಲಿ ಅದಕ್ಕೆ ಪ್ರವೇಶವೇ ಇಲ್ಲದಂತಾಗುತ್ತದೆ. ಎಲ್ಲೆಲ್ಲಿಯೋ ಹೋಗುತ್ತಿದ್ದ ಮನಸ್ಸನ್ನು ಹಿಂದಿರುಗಿಸಿ ಕಾಯಕದಲ್ಲಿ ನಿಲ್ಲುವಂತೆ ಮಾಡುವುದರಿಂದ ಮನಸ್ಸಿನ ಸ್ಥೈರ್ಯ ಮತ್ತು ಪಾವಿತ್ರ್ಯಗಳು ಹೆಚ್ಚುತ್ತವೆ. ನಿರ್ಮಲ ಮನೋಭೂಮಿಕೆಯಲ್ಲಿ ಬಿತ್ತಲ್ಪಟ್ಟ ಆಧ್ಯಾತ್ಮಿಕ ಬೀಜವು ಚೆನ್ನಾಗಿ ಅಂಕುರಿಸಿ, ವೃಕ್ಷವಾಗಿ, ಫಲಗಳನ್ನೀಯುವುದು

"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಟಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



## ಸಂಪಾದಕೀಯ

### ಆತ್ಮಾವಲೋಕನ

ಮಠಮಾನ್ಯಗಳ "ವೈಶಿಷ್ಟ್ಯ ಇರುವುದು ತಾತ್ವಿಕ ಸಿದ್ಧಾಂತಕ್ಕೂ ಧಾರ್ಮಿಕ ಆಚರಣೆಗೂ ಸಮನ್ವಯವನ್ನು ಕಲ್ಪಿಸುವುದರಲ್ಲಿ ಧಾರ್ಮಿಕ ಆಚರಣೆ ಶಕ್ತಿಶಾಲಿಯಾಗಬೇಕಾದರೆ ಅದು ತಾತ್ವಿಕ ಸಿದ್ಧಾಂತದ ಅಡಿಪಾಯದ ಮೇಲೆ ನಿಂತಿರಬೇಕು. ವಿಚಾರ ಸಮನ್ವಿತವಾಗಿರಬೇಕು. ಅಂತೆಯೇ ತಾತ್ವಿಕ ಜಿಜ್ಞಾಸೆ ಶುಷ್ಕವಾಗದೆ ಅದರಿಂದ ತುಷ್ಟಿಪುಷ್ಟಿಗಳು ಲಭಿಸಬೇಕಾದರೆ ಆಚಾರದೊಡನೆ ಬೆರೆತು ಜೀವನದಲ್ಲಿ ಅಳವಡುವಂತಿರಬೇಕು. ಇವೆರಡನ್ನೂ ಸಾಧಿಸಿದೆ'' ಶ್ರೀ ಮಠ "ಆಧುನಿಕ ವಿಚಾರ ದೃಷ್ಟಿಗೆ'' ಶ್ರೀ ಮಠ ''ಬಹಳ ಅರ್ಥಗರ್ಭಿತವಾಗಿ ಕಾಣುವುದರಲ್ಲಿ ಸಂದೇಹವಿಲ್ಲ. ಆಧ್ಯಾತ್ಮಿಕ ಸಾಧನೆಗೆ ಒಡ್ಡಿರುವ ಒಂದು ಮನಶಾಸ್ತ್ರದ ಪ್ರಯೋಗ ಶಾಲೆ ಎಂದು ಅದನ್ನು ಕರೆಯಬಹುದು. ಸಂದೇಹ ತಳಮಳ, ಆತಂಕ-ಕುತೂಹಲ, ನಿಷ್ಠೆ-ನಿರೀಕ್ಷಣೆ- ಈ ಎಲ್ಲ ಭಾವಗಳೂ ಅಲ್ಲಿ ವ್ಯಕ್ತವಾಗುತ್ತವೆ" ಮತ್ತು "ತತ್ವಜಿಜ್ಞಾಸೆಯ ಜ್ಞಾನಮಾರ್ಗ, ಕ್ರಿಯಾಚರಣೆಯ ಕರ್ಮಮಾರ್ಗ, ಉಪಾಸನೆಯ ಭಕ್ತಿಮಾರ್ಗಗಳು ಇಲ್ಲಿ ಮುಪ್ಪುರಿಗೊಂಡಿವೆ."

ಇಂಥ ಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಸ್ವಾಮಿಗಳವರಲ್ಲಿ ನಾಡಿನ ಜನತೆ "ಇಟ್ಟಿರುವುದು ಅವಿವೇಚಿತವಾದ ಅಂಧ ಶ್ರದ್ಧೆಯಲ್ಲ ದೊಡ್ಡದರ ವಿಚಾರದಲ್ಲಿ ವಿಚಾರಪೂರ್ವಕವಾದ ಶ್ರದ್ಧೆ; ಶುದ್ಧಾಂತಃಕರಣದಿಂದ ಮಾಡಿದ ಶ್ರದ್ಧೆ. ಅಲ್ಲದೆ ಶ್ರೀ ಶ್ರೀಗಳವರ ಮಾರ್ಗದರ್ಶನದಲ್ಲಿ ಕುರುಡು ನಂಬಿಕೆಗೆ ಎಡೆಯಿಲ್ಲ. ಶ್ರೀ ಶ್ರೀಗವರು "ಸ್ಫಟಿಕದ ಘಟದೊಳಗೆ ಎತ್ತಿದ ಜ್ಯೋತಿ" "ಸುಳಿವ ಲಿಂಗ'' ನಿರಾಭಾರಿ ಜಂಗಮ. ಅಂಥವರ ವಿಚಾರದಲ್ಲಿ ಜನತೆ ಸಂಯಮದಿಂದ, ಗೌರವದಿಂದ ವರ್ತಿಸಬೇಕು. ಆಳವಾದ ಆಲೋಚನೆಯಿಂದ ಒಂದು ಮಾರ್ಗದ ಸತ್ಯಾಸತ್ಯಗಳನ್ನು ಒಳಿತು ಕೆಡುಕುಗಳನ್ನು, ಆಗು-ಹೋಗುಗಳನ್ನು ಪರಿಶೀಲಿಸಬೇಕು. ಸತ್ಯವೆನಿಸಿದುದನ್ನು ಅವಲಂಬಿಸಬೇಕು. ಶರಣಧರ್ಮದ ಸಾಕಾರಮೂರ್ತಿಗಳಾದ ಶ್ರೀ ಶ್ರೀಗಳು "ವ್ಯಕ್ತಿ ಎಷ್ಟೇ ದೊಡ್ಡವನಾಗಲಿ, ಕಾಯಕವಿಲ್ಲದೆ ಬದುಕುವ ಹಕ್ಕಿಲ್ಲ ಎಂಬುದನ್ನು ತಾವು ಆಚರಣೆಯಿಂದ ತೋರಿಸಿದ್ದಾರೆ. ಅಲ್ಲದೆ ಅವರ ದುಡಿಮೆ ಅವರಿಗಾಗಿಯಲ್ಲ, ಸಮಾಜಕ್ಕಾಗಿ, ಜನತೆಯ ಒಳಿತಿಗಾಗಿ. ತಮ್ಮ ಆಚಾರವಿಚಾರಗಳಿಂದ ಜನತೆಯ ಮನಸ್ಸನ್ನು ಮುಟ್ಟಿ ಎಚ್ಚರಿಸಿದ್ದಾರೆ. ದೀನರು, ದುಃಖಿಗಳು ಎನಿಸಿಕೊಂಡವರಲ್ಲಿ ಆತ್ಮವಿಶ್ವಾಸವನ್ನೂ ನೆಚ್ಚನ್ನು ಕೆಚ್ಚನ್ನೂ ಮೂಡಿಸಿದ್ದಾರೆ.''

ಇತ್ತೀಚಿನ ಶ್ರೀ ಮಠದ ಪ್ರಕರಣದಿಂದಾಗಿ ಮುಗ್ಧ ಜೀವಿಗಳಿಂದ ಬುದ್ಧಿಜೀವಿಗಳವರೆಗೆ ಒಂದು ಮಾತು ಶ್ರೀ ಶ್ರೀ ಗಳವರ ಬಗ್ಗೆ ಕೇಳಿಬರುತ್ತಿದೆ ಅದು 'ಅಧಿಕಾರಕ್ಕೆ' ಸಂಬಂಧಿಸಿದ್ದಾಗಿದೆ. ಪರಮ ಪೂಜ್ಯ ಶ್ರೀ ಶ್ರೀಗಳು ಎಷ್ಟು ಕಾಲ

ಈ ಸಮಾಜನ ಸೇವೆಯನ್ನು ಮಾಡಲಪೇಕ್ಷಿಸುತ್ತಾರೋ ಅಷ್ಟೂ ಪುಣ್ಯ ಸಮಾಜದ್ದಾಗುತ್ತದೆ. ಅದನ್ನು ಅರ್ಥಮಾಡಿಕೊಳ್ಳದೆ "ಅಧಿಕಾರ" ಬಿಟ್ಟುಕೊಡಿ ಎಂದು ಕೇಳುವುದು ಸಮಾಜ ತನ್ನ ಪುಣ್ಯವನ್ನು ತಾನೇ ಕೈಯಾರೆ ದೂರ ತಳ್ಳಿದಂತಾದೀತು. ಪುಣ್ಯ ಪುರುಷರ ಅವತಾರ ಶತಮಾನಗಳಿಗೊಮ್ಮೆ ಆಗುತ್ತದೆ ಎನ್ನುತ್ತಾರೆ. ಪೂಜ್ಯ ಶ್ರೀ ಶ್ರೀಗಳು ಹಾಗೆ ಅವತರಿಸಿರುವಂಥವರು.

ಈ ಯುಗ ಕಂಡ ಪುಣ್ಯಪುರುಷರಲ್ಲೊಬ್ಬರು. ಸಮಾಜ ಚಾರಿತ್ರ್ಯದಿಂದ ಪಾಠಕಲಿಯಬೇಕು. ಕ್ರಿಯಾಶೀಲ ಚೇತನಗಳನ್ನು, ಕ್ರಾಂತದರ್ಶನ ಶ್ರೀಗಳನ್ನು, ಸೇವೆಯೇ ಲಿಂಗಪೂಜೆಯೆಂದು ಬಾಳುವವರುನ್ನು ದೂರುವುದು, ನಿಂದಿಸುವುದು, ಪ್ರತಿಭಟಿಸುವುದು ತನ್ನ ಕೊಳಕು ಮುಖವನ್ನು ಬೀದಿಯಲ್ಲಿ ತೋರಿದುಕೊಳ್ಳುವ ಹವ್ಯಾಸವಷ್ಟೇ ಹೊರತು ಇನ್ನೇನು ಅಲ್ಲ. ಸಮಾಜದ ಹಲಕೆಲವರು ಅನ್ನುತ್ತಾರೆಂದ ಮಾತ್ರಕ್ಕೆ ಬಂಗಾರದ ಬೆಲೆಯೇನು ಕಡಿಮೆಯಾಗುವುದಿಲ್ಲ; ಅಥವಾ ಆ ಬಂಗಾರ ಬೆಳ್ಳಿ ಅಥವಾ ತಾಮ್ರವಾಗುವುದಿಲ್ಲ. ಅಲ್ಲದೆ ಸಮಾಜ ತನ್ನನ್ನು ಹಾಗೆಂದಿತು ಹೀಗೆಂದಿತು ಎಂದು ಮಾವಿನಮರ ಬೇವಿನ ಹಣ್ಣು ಬಿಡುವುದಿಲ್ಲ. ಯಾರು ಎಷ್ಟು ಏನೇ ಸುರಿದರೂ ತನ್ನ ಮಾಧುರ್ಯವನ್ನು ಕಳೆದುಕೊಳ್ಳುವುದಿಲ್ಲ, ಎಲ್ಲವನ್ನು ಹೀರಿ, ಅರಗಿಸಿಕೊಂಡು ನಳನಳಿಸಿ ಬೆಳೆಯುತ್ತದೆ. ಮಧುರ ಫಲ ನೀಡುತ್ತದೆ. ನಿತ್ಯ ಬೇವನ್ನು ಕುಡಿದೇ ಬೆಳೆದಿರುವ ಶ್ರೀ ಶ್ರೀಗಳವರ ಮಹಾ ಚೇತನಕ್ಕೆ ಯಾರೇನು ಸುರಿದರೂ ಅದು ಮಧುರವನ್ನಲ್ಲದೆ ಮತ್ತೊಂದನ್ನು ನೀಡಲಾರದು. "ಬೈದವರ ಬಂಧುಗಳೆಂಬೆ, ಹೊಯ್ದವರ ಹೊರೆದವರೆಂಬೆ" ಎನ್ನುತ್ತದೆ. ಸೇವಾಮಣಿಹವನ್ನು ಅವರಿಗೂ ತೆರೆದು ಸ್ವಾಗತಿಸುತ್ತದೆ. ಪೂಜ್ಯ ಪಾದರನ್ನು ಅಂದ ಬಾಯಿ, ತೋರಿದ ಕೈ ಮಾತ್ರ ತನ್ನ ಅವಲಕ್ಷಣವನ್ನು ತೋರಿಸಿ ಕೊಂಡಂತಾಗುತ್ತದೆ ಅಷ್ಟೆ

ಇನ್ನು

ಯಾವುದೇ ಅಧಿಕಾರ ಸೇವಾ ಮಾರ್ಗದಿಂದಲೇ ಬರುವಂಥದು. ಅಧಿಕಾರವೆಂಬ ನಾಣ್ಯಕ್ಕೆ ಹಕ್ಕು ಮತ್ತು ಕರ್ತವ್ಯಗಳೆಂಬ ಎರಡು ಮುಖಗಳು. ಯಾವ ಮುಖ ನೆಗ್ಗಿದರೂ ನಾಣ್ಯ ಚಲಾವಣೆಗೆ ಬರದು. ಹಕ್ಕುಬಯಸುವವರು ಕರ್ತವ್ಯದ ಕಮ್ಮಟದಲ್ಲಿ ಬೆಂದು ಅಡಿಗಲ್ಲಮೇಲೆ ಬಿದ್ದು 'ಕಡಿಹಕ್ಕೆ ಬಡಿಹಕ್ಕೆ' ಸಿಕ್ಕಿ ರೂಪಿತವಾಗಬೇಕು. ಕಡಿಹ ಬಡಿಹಗಳಿಗೆ ಬೆನ್ನು ಮಾಡಿದವರಿಗೆ ಹಕ್ಕು ದಕ್ಕುವುದಾದರೂ ಹೇಗೆ? ಈ ಸಂಬಂಧವಾಗಿ ಏನೆಲ್ಲ ಮಾತುಗಳು, ಘೋಷಣೆಗಳು ಮೆರೆವಣಿಗೆ ಮುಷ್ಕರಗಳು, ಸಮಿತಿಗಿಮಿತಿಗಳು, ಕೆಲವು ಪತ್ರಿಕೆಗಳು ಬರೆದವು ಬರೆದವು ಬರೆಯುತ್ತಲೇ ಇವೆ. ಅದೂ ಪತ್ರಿಕಾ ಧರ್ಮಕ್ಕೆ ಸಲ್ಲದ ಭಾಷೆಯಲ್ಲಿ, ಮೇಲಾಗಿ ಆ ಪ್ರಯತ್ನದಲ್ಲಿ ಪೈಪೋಟಿಯನ್ನೆ ಸಾರಿರುವಂತೆ ಕಾಣುತ್ತದೆ. ಅಪಪ್ರಚಾರದಲ್ಲಿ ತಾನು ಯಾರಿಗೇನು ಕಡಿಮೆ? ಎಂಬ ಸವಾಲು ಹಾಕಿ ನಡೆದಿವೆ. ಇದರಿಂದ



ಯಾರಿಗೇನು ಲಾಭ? ಯಾರ ಕಲ್ಯಾಣ ಸಾಧನೆ? ಯಾವ ಮಂಗಳಕರ ವಾತಾವರಣದ ಸೃಷ್ಟಿಯಾಯಿತು?

ಕೊನೆಯದಾಗಿ—

ನಮ್ಮ ಅಳತೆಯಷ್ಟೇ ನಮ್ಮ ದೇವರು ಎಂಬುದು ನಮಗೆ ತಿಳಿದಿರಬೇಕು. ನಾವು ದೊಡ್ಡವರಾಗದ ತನಕ ನಮ್ಮ ದೇವರು, ನಮ್ಮ ಗುರುಗಳು ನಮ್ಮ ಜೀವನ ದೊಡ್ಡದಾಗದು. ನಾವು ಅಪ್ಪಿಕೊಂಡು ಬಂದ ಧರ್ಮ ದೊಡ್ಡದೆನಿಸದು. ನಮ್ಮ ಸಂಸ್ಕೃತಿ ಎಂಬುದು ಸಾರ್ವಜನಿಕ ವೇದಿಕೆಗಳ ಮೇಲೆ ರೂಪಿತವಾಗುವುದಿಲ್ಲ. ನಮ್ಮ ವೈಯಕ್ತಿಕ ನಡೆನುಡಿಗಳಿಂದ ರೂಪಿತವಾಗುತ್ತದೆ. ●

---

# ಮಾಣಿಕ್ಯ ದೀಪ್ತಿ

ಹೆಚ್.ಎಸ್. ಸಿದ್ಧಗಂಗಪ್ಪ, ಎಂ.ಎ., ಸಾಮಾಜಿಕ ಕಾರ್ಯಕರ್ತ, ರೋಗನಿವಾರಕ ಮತ್ತು ಸಾಮಾಜಿಕ ವೈದ್ಯಕೀಯ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು 560002

"ಬೂಟಾಟಿಕೆ ದಾಸಯ್ಯನಿಗೆ ಮೈಯಲ್ಲ ನಾಮ" ಎಂಬುದು ಬೂಟಾಟಿಕೆ ವ್ಯಕ್ತಿಗಳನ್ನು ಕುರಿತು ಹೇಳುವ ಒಂದು ಜನಪ್ರಿಯ ಗಾದೆ. ನಾಮವನ್ನು ಹಾಕಿಕೊಳ್ಳುವ ಕಡೆ ಹಾಕಿಕೊಂಡರೆ ದಾಸಯ್ಯನ ವೇಷಕ್ಕೆ ಭೂಷಣವಾಗುತ್ತದೆ ನಾಮಕ್ಕೂ ಒಂದು ಅರ್ಥ ಬರುತ್ತದೆ. ಹಾಗೆ ಮಾಡದೆ, ಕೈ ಕಾಲು ಹೊಟ್ಟೆ ಬೆನ್ನುಗಳಿಗೆಲ್ಲ, ಹಾಕಿಕೊಂಡರೆ ಬೂಟಾಟಿಕೆಯಾಗುತ್ತದೆ. ಮಾತಾಗಲಿ, ನಡತೆಯಾಗಲಿ, ಆಚಾರವಾಗಲಿ. ವಿಚಾರವಾಗಲಿ, ವಾಸ್ತವಿಕ ಎಲ್ಲೆಯನ್ನು ಮೀರಿದರೆ ಕೃತ್ರಿಮವಾಗುತ್ತದೆ. ಆಡಂಬರವೆನ್ನಿಸುತ್ತದೆ.

ಬೂಟಾಟಿಕೆಗೆ ಪರ್ಯಾಯವಾಗಿ ಕಪಟತನ, ಡಾಂಬಿಕತೆ ಆಷಾಢಭೂತಿ, ಅತಿವಿನಯ ತೋರಿಸುವುದು ಎಂದೆಲ್ಲ ಕರೆಯುತ್ತಾರೆ. ವಿನಯ ವ್ಯಕ್ತಿಯ ಬೌದ್ಧಿಕ ಹಾಗೂ ಮಾನಸಿಕ ವಿಕಾಸಕ್ಕೆ ಸಚ್ಚಾರಿತ್ರ್ಯಕ್ಕೆ ಹಿಡಿದ ಕನ್ನಡಿಯಾದರೆ ಅತಿವಿನಯ ಧೂರ್ತತನವನ್ನು ಕುಟಿಲೋಪಾಯವನ್ನು ಸಂಕೇತಿಸುತ್ತದೆ. ಇಂತಹವರನ್ನು ಕಂಡು ಬಲ್ಲವರು "ಅತಿವಿನಯಂ ಧೂರ್ತ ಲಕ್ಷಣಂ" ಎಂದಿದ್ದಾರೆ.

ಬೂಟಾಟಿಕೆ ವ್ಯಕ್ತಿಗಳು ಇಂದು ಎಲ್ಲ ಕಡೆ ಪಾರ್ಥೇನಿಯಂ ಕಳೆಯಂತೆ ವ್ಯಾಪಿಸಿದ್ದಾರೆ. ಇಂತಹವರನ್ನು ಕಂಡು ಜನಪದರು

"ಬಡಾಯಿ ನೋಡಿದ್ರೆ ಕಡಾಯದ ಗಾತ್ರ ಕಡಾಯ ಬಗ್ಸಿ ನೋಡಿದ್ರೆ ವಕ್ಕಳ ರಾಗಿಲ್ಲ"

"ಬರೀ ಬಡಾಯ ಒಳ್ಳೆ ಲಡಾಯ"

"ಬರೀ ಮಾತಿನ ಗಂಡ, ಬುಗಡಿ ಮಾಡಿಸೋದು ದಿಟವೇ"

"ಬರೀ ಮಾತಿನ ಚೆನ್ನಕ್ಕ, ಬಾಯೆಲ್ಲ ಅಪರಂಜಿ"

"ಬಡಾಯ ಕೋರನ ಮನ್ಯಾಗೆ ಕುಡೀಲಿಕ್ಕೆ ನೀರಿಲ್ಲದಿದ್ರೂ ಶರಕ್ಕೆ ಮೂರಿಡಿ ಸಕ್ರೆ ಇಡು ಅಂತಿದ್ದ" ಇತ್ಯಾದಿ ಗಾದೆಗಳ ಮೂಲಕ ಅವರ ಅಂತರಂಗವನ್ನು ಬಹಿರಂಗ ಗೊಳಿಸಿದ್ದಾರೆ. ಬೂಟಾಟಿಕೆಗಾರರಿಗೆ ಬಾಯೇ ಬಂಡವಾಳ. ಯಾರೊಂದಿಗೆ ಹೇಗೆ ನಡೆದು ಕೊಳ್ಳಬೇಕು ಹೇಗೆ ಮಾತನಾಡಬೇಕು ಎಂಬ ತಂತ್ರದ ಅರಿವಿದ್ದರೆ ಸಾಕು, ಜನರಿಗೆ ಸುಲಭವಾಗಿ ಟೋಪಿ ಹಾಕಬಹುದು, ಬೆಣ್ಣೆಯಲ್ಲಿ ಕೂದಲನ್ನು ತೆಗೆಯುವ ಚಾಣಾಕ್ಷತನವನ್ನು ರೂಢಿಸಿಕೊಂಡ ಇವರು ಸುಲಭವಾಗಿ ಕೆಲಸ ಗೆದಿಯುತ್ತಾರೆ.

ಒಬ್ಬ ವ್ಯಕ್ತಿಯಿಂದ ಕೆಲಸವಾಗಬೇಕಾದರೆ ಅವನೆಷ್ಟೇ ಕೆಟ್ಟವನಿರಲಿ ಮರೆಯಲ್ಲಿ ಮಚ್ಚು ಮಸೆಯುತ್ತಾ ಎದುರಲ್ಲಿ ನಗುವನ್ನು ಪ್ರದರ್ಶಿಸುತ್ತಾ ಹೆಜ್ಜೆ ಹೆಜ್ಜೆಗೂ ಡೊಗ್ಗು ಸಲಾಮು ಹೊಡೆದು ಕೆಲಸ ಮಾಡಿಸಿಕೊಳ್ಳುವ ಕಲೆಯನ್ನು ಕರಗತ ಮಾಡಿಕೊಂಡಿರುತ್ತಾರೆ. ತಾನೊಬ್ಬ ಸಭ್ಯ ಪ್ರಾಮಾಣಿಕ ವ್ಯಕ್ತಿಯೆಂದು ತೋರಿಸಿಕೊಳ್ಳಲು ತನ್ನ ಮೇಲಿನ ಅಧಿಕಾರಿ ಮಾಲೀಕ, ಯಜಮಾನ ಹಾಗೂ ಇತರೆಯವರ ಪ್ರೀತಿ ವಿಶ್ವಾಸವನ್ನು ಗಳಿಸಲು ಸೋಗು ಹಾಕುತ್ತಾರೆ. ಅವರ ವಿಶ್ವಾಸಕ್ಕೆ ಪಾತ್ರರಾಗಲು ಅನೇಕ ಕೆಟ್ಟ ಮಾರ್ಗಗಳನ್ನು ಅನುಸರಿಸುತ್ತಾರೆ.

ಕೆಲವರು ಒಳಗೆ ಎಷ್ಟೇ ಹುಳುಕು ಇದ್ದರೂ ಅದನ್ನು ತೋರಿಸಿಕೊಳ್ಳದೆ, ಹೊರಗೆ ವಿಶಿಷ್ಟ ವ್ಯಕ್ತಿಗಳಾಗಿ ಮೆರೆಯಲು ಸದಾ ಪ್ರಯತ್ನಿಸುತ್ತಿರುತ್ತಾರೆ. ತನ್ನ ಜೇಬು ಖಾಲಿಯಾಗಿದ್ದರೂ ಬಾಯಲ್ಲಿ ಯಾವಾಗಲೂ ನೂರರ ಮಾತನಾಡುವುದು' ತನ್ನಲ್ಲಿ ಇಲ್ಲದ ವಿಶೇಷ ಗುಣಗಳನ್ನು ಇದೆ ಎಂದು ತೋರಿಸಿಕೊಳ್ಳುವುದು. ಬೇರೆಯವರಲ್ಲಿ ಇಲ್ಲದ ಗುಣ ವಿಶೇಷಗಳನ್ನು ಇದೆ ಎಂದು ಹೊಗಳುವುದು ಬೂಟಾಟಿಕೆಯ ಲಕ್ಷಣ.

ಸಮಾಜದಲ್ಲಿ ಒಬ್ಬ ಪ್ರಾಮಾಣಿಕ ವ್ಯಕ್ತಿಗಿಂತ ಅಪ್ರಾಮಾಣಿಕ ವ್ಯಕ್ತಿ ಹೆಚ್ಚು ಜನಪ್ರಿಯನಾಗುತ್ತಾನೆ. ಏಕೆಂದರೆ ಬಾಯಲ್ಲಿ ಬೆಣ್ಣೆ ಬಗಲ್ಲಲ್ಲಿ ದೊಣ್ಣೆಯನಿಟ್ಟುಕೊಳ್ಳುವ ಗುಣ ಅವನಲ್ಲಿ ಚನ್ನಾಗಿ ಕರಗತವಾಗಿರುತ್ತದೆ. ತಮ್ಮ ಕೆಲಸವಾಗಬೇಕಾದಾಗ ವ್ಯಕ್ತಿಗಳ ಹತ್ತಿರ ಹೇಗೆ ನಡೆದುಕೊಳ್ಳಬೇಕು. ಅವರನ್ನು ಹೇಗೆ ಸಂತೋಷಗೊಳಿಸಬೇಕು ಎನ್ನುವ ಕಲೆಯನ್ನು ರೂಢಿಸಿ ಕೊಂಡಿರುತ್ತಾರೆ ಆದರೆ ಎಲ್ಲರ ಹತ್ತಿರ ಬೂಟಾಟಿಕೆಯವರ ಬೇಳೆ ಬೇಯುವುದಿಲ್ಲ. ಆದರೂ ಅವರ ಬಣ್ಣ ಬಯಲಾಗುವ ಹೊತ್ತಿಗೆ ತಮ್ಮ ಕೆಲಸವನ್ನು ಸಾಧಿಸಿಕೊಂಡಿರುತ್ತಾರೆ ಈ ಬೂಟಾಟಿಕೆ ವ್ಯಕ್ತಿಗಳು ಹಾಕಿದ ಗಾಳಕ್ಕೆ ಸಿಕ್ಕಿ ತೊಂದರೆಗೆ ಒಳಗಾದವರು ಇಂಥಹವರನ್ನು ದೂರದಲ್ಲಿಡಬೇಕೆಂದು ಎಚ್ಚರಿಕೆ ಮಾತನ್ನಾಡುವುದು.

[ಆಕಾಶವಾಣಿ ಕೃಪೆ]





# ಬಸವ ಪ್ರತಿಜ್ಞಾ

—ಟಿ. ಎನ್. ಮಹಾದೇವಯ್ಯ

"ದೇವ ದೇವ ಬಿನ್ನಪವನವಧಾರು, ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾಗಿ ಭವಿಯಾದವರನೊಂದೇ ಎಂಬೆ. ಹೀಗೆಂದು ನಂಬುವುದೆನ್ನ ಮನವು ಈ ನುಡಿದ ನುಡಿಯೊಳಗೆಳ್ಳ ಮೊನೆಯಷ್ಟು ಸಂದೇಹವುಳ್ಳರೆ ಹಲ್ಲುದೋರಿ ಮೂಗು ಕೊಯ್ಯಿ ಕೂಡಲ ಸಂಗಮದೇವ"

ಧರ್ಮವನ್ನು ಮನ್ನಿಸುವ ಮಹಾ ಪುರುಷರ ಹೃದಯವು ಎಂದೂ ಸಂಕುಚಿತವಾಗಲಾರದು. ಅವರ ಹೃದಯವು ಪೂರ್ಣವಾಗಿ ತೆರೆಯಲ್ಪಟ್ಟು ಹೊರಗಿನ ತಂಪಾದ ಗಾಳಿ, ಬಿಸಿಲುಗಳು ಬೀಳಲು ಸಹಾಯ ಮಾಡಿಕೊಡುತ್ತೀವೆಯೇ? ಹೊರತು ಕತ್ತಲು ಕೋಣೆಯಲ್ಲಿ ಕೊಳೆತು ನಾರಲು ಬಿಡುವುದಿಲ್ಲ. ಅವರ ಹೃದಯವು ವಿಶ್ವದಷ್ಟು ವಿಶಾಲವಾದುದು. ಆಧಾರವಿಲ್ಲದ ಧರ್ಮ ತತ್ವಗಳನ್ನು ಜನಾಂಗವನ್ನು ಧ್ವಂಸ ಮಾಡುವ ಧರ್ಮ ತತ್ವಗಳನ್ನು ಒಂದು ಜನಾಂಗದ ತಲೆಯಮೇಲೆ ಕಾಲಿಟ್ಟು ತುಳಿಯುವ ಕೆಟ್ಟ ತತ್ವಗಳನ್ನು ಅವರು ಎಂದೂ ಮನ್ನಿಸುವುದಿಲ್ಲ. ಕಿತ್ತು ಬಿಸಾಡುವರು. ದೇವರ ದೃಷ್ಟಿಯಿಂದ ಎಲ್ಲ ಮಾನವರೂ ಪರಮಾತ್ಮನ ಪುತ್ರರು. ಅವರೆಲ್ಲರೂ ಸಮ ನಾನು ಹೆಚ್ಚು ನೀನು ಕೀಳೆಂದು ಅಕಾರಣವಾಗಿ ಒಂದು ಜನಾಂಗವನ್ನು ಕೊಳೆತು ನಾರಲು ಬಿಟ್ಟು, ಎಲ್ಲರ ಸೇವೆ ಮಾಡುವ ಗುಲಾಮಗಿರಿಯ ಭಾರ ಹೇರುವ ಮೂರ್ಖತೆಯು, ಹಿರಿದಾಗಿ ಮೆರೆಯಿಸಿಕೊಳ್ಳಬೇಕೆಂಬ ದುರಹಂಕಾರದ ಜನಗಳಲ್ಲಿ ಉಕ್ಕಿ ಬಂದಿತ್ತು. ಅದನ್ನು ಕಿತ್ತು ಬಿಸಾಡಿ ಧರ್ಮ, ಅಧರ್ಮಗಳ ಅನುಯಾಯಿಗಳಿಗೆ ತಕ್ಕ ಹಾಗೆ ಎರಡು ಜಾತಿಯನ್ನು ಬಸವೇಶ್ವರನು ಕಲ್ಪಿಸಿ ಅಸ್ಪೃಶ್ಯತೆಯ ಪಿಶಾಚಿಯನ್ನು ತೊಲಗಿಸಿರುತ್ತಾನೆ. ಅವರ ವಿಶ್ವಪ್ರೇಮದ ಅತ್ಯಂತ ಶ್ರೇಷ್ಠಕರವಾದ ಕುರುಹು ಇದೇ

ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿರುವಂತೆ "ಲೋಕದಲ್ಲಿ ದೈವ ಅಸುರವೆಂದು ಪ್ರಾಣಿಗಳ ಸ್ವಭಾವವು ಎರಡು ವಿಧ" ವೆಂಬುದನ್ನು ಬಸವೇಶ್ವರರು ದೈವಭಕ್ತರು, ದೇವರನ್ನು ಪೂಜಿಸದವರು ಎಂದು ವಿಭಾಗಿಸಿದನು. ಅಳಿದ ಮಹಾ ಪುರುಷರೆಲ್ಲರೂ ವಿಶ್ವ ಪ್ರೇಮಿಗಳಾಗಿದ್ದುದರಿಂದಲೇ ಇತಿಹಾಸದ ಗರ್ಭದಲ್ಲಿ ಅವರ ಹೆಸರು ಸ್ವರ್ಣಾಕ್ಷರಗಳಿಂದ ಲಿಖಿತವಾಗಿದೆ. ಉಚ್ಚನೀಚ ಭಾವನೆಗಳು ಅಳಿಯಲೇ

ಬೇಕೆಂದು ಹಲವಾರು ಮಹಾ ಪುರುಷರು ಜನ್ಮವೆತ್ತಿರುತ್ತಾರೆ. ಭಗವಾನ್ ಬುದ್ಧದೇವನು "ಮನುಷ್ಯನು ಜಟೆಯನ್ನು ಧರಿಸುವುದರಿಂದಾಗಲಿ ಇಲ್ಲವೆ ತನ್ನ ಹುಟ್ಟುವಿಕೆಯಿಂದಾಗಲಿ ಮತ್ತು ತನ್ನ ವಂಶದಿಂದಾಗಲಿ ಇಲ್ಲವೆ ಅಗ್ನಿಹೋತ್ರಾದಿಗಳಿಂದಾಗಲಿ ಎಂದಿಗೂ ಬ್ರಾಹ್ಮಣನೆನಿಸಿಕೊಳ್ಳಲಾರನು. ಆದರೆ ಯಾವಾತನಲ್ಲಿ ಸತ್ಯ, ಅಹಿಂಸಾದಿ ಸದ್ಗುಣಗಳಿವೆಯೋ ಆತನೇ ನಿಜವಾದ ಮಹಾತ್ಮನು. ಮತ್ತು ಆತನೇ ನಿಜವಾದ ಬ್ರಾಹ್ಮಣನು ಎಂದಿರುವನು. ಹುಟ್ಟಿನಿಂದ ಜಾತಿ ನಿರ್ಣಯ ಮಾಡುವುದು ಶುದ್ಧ ತಪ್ಪು. ಅವನ ಗುಣ ಕರ್ಮಗಳ ಮೇಲೆ ವರ್ಣಾಶ್ರಮ ಧರ್ಮಗಳನ್ನು ಸ್ಥಾಪಿಸಬೇಕು. ಒಂದು ಜನಾಂಗವನ್ನು ಹಾಳು ಮಾಡುವ; ಒಂದು ರಾಷ್ಟ್ರವನ್ನು ಹಾಳು ಮಾಡುವ ಧರ್ಮವನ್ನು ಯಾರೂ ಧರ್ಮವೆಂದು ಮನ್ನಿಸಲಾಗದು. ಮನುಷ್ಯಜೀವನವನ್ನು ಹಿಂಸಿಸಿ, ಜನರ ಕುತ್ತಿಗೆ ಹಿಚುಕಿ, ಅವರ ಎದೆ ತುಳಿದು, ರಕ್ತಕಾರುವಂತೆ ಮಾಡುವುದು ಧರ್ಮವಲ್ಲ. ಅದು ಧರ್ಮವಾಗಿದ್ದರೂ ಶಾಶ್ವತವಾಗಿ ಉಳಿಯುವ ಧರ್ಮವಲ್ಲ. ಕಾಲಕ್ಕೆ ತಕ್ಕಹಾಗೆ ಜನಾಂಗದ ಹಿತಕ್ಕೆ ತಕ್ಕಹಾಗೆ ಪ್ರಗತಿ ಹೊಂದುವುದೇ ಶ್ರೇಷ್ಠ ಧರ್ಮವಿರುತ್ತದೆ. ಅದಕ್ಕಾಗಿಯೇ ಸ್ವಾಮಿ ರಾಮತೀರ್ಥರು ಹೀಗೆ ನುಡಿದಿರುವರು:–ಸಿಂಹದ ತೊಗಲನ್ನು ಹಾಕಿಕೊಂಡು ಸಿಂಹದಂತೆ ಮೆರೆಯುವುದು ನಿಮ್ಮ ಮನಸ್ಸಿನೊಳಗೆ ಇದ್ದಲ್ಲಿ ನೀವು ಜಾತಿಭೇದ, ವಿಷಯ ಭಾವನೆ ಮೊದಲಾದ ನಿಮ್ಮ ಮಂಚಿನ ಗಾರ್ದಭ ರೂಢಿಗಳನ್ನು ಪೂರ್ಣವಾಗಿ ಬಿಟ್ಟುಬಿಡಿರಿ ಎಂದಿರುವರು.

ಒಂದು ಜನಾಂಗಕ್ಕೆ ಹಿರಿಮೆ ಅಥವಾ ಶ್ರೇಷ್ಠತೆಯು ಬರಬೇಕಾದರೆ ಆ ಸಮಾಜವು ಎಲ್ಲ ಜನಗಳಿಗೆ ತಾನು ಕಲ್ಪಿಸಿಕೊಡುವ ಸಹಾಯದಿಂದಲೂ ಗೌರವದಿಂದಲೂ ಬರುತ್ತದೆ. ಹುಟ್ಟಿದವರೆಲ್ಲರೂ ಜನ್ಮದಿಂದಲೇ ಮಹಾ ಪುರುಷರಾಗುವರು ಎಂದು ಚಂಡಾಲರಿಗೆ ಯೋಗ್ಯವಾದ ಕೆಟ್ಟಕೆಟ್ಟ ಗುಣಗಳನ್ನು ತುಂಬಿಕೊಂಡು, ನೀಚ ದ್ರವ್ಯಹಾರಗಳನ್ನು ಮಾಡುತ್ತಿದ್ದು ಪರರನ್ನು ಕೀಳಾಗಿ ಭಾವಿಸಿ, ಕಾಲುಚಾಚಿ, "ಶರಣು ಹೊಡಿ, ಕಾಲಿಗೆ ಬೀಳು" ಅಂದರೆ ಆತನು ಚಂಡಾಲರಿಗಿಂತಲೂ ನೀಚನಾಗುತ್ತಾನೆ. ಅಂತಹರಿಂದ ಒಂದು ಸಮಾಜವು ಎಂದೂ ಉನ್ನತಿಗೆ ಬರುವುದಿಲ್ಲ. ಎಂದೂ ರಾಷ್ಟ್ರ ಕಲ್ಯಾಣವಾಗಲಾರದು. ಪೃಥ್ವಿಯಲ್ಲಿ ಯಾವ ಮತವೂ ಮನುಷ್ಯತ್ವದ ಗಂಭೀರತೆಯನ್ನು ಹಿಂದೂ ಮತದಷ್ಟು ಉಚ್ಚತರವಾಗಿ ಬೋಧಿಸುವುದಿಲ್ಲ. ಮತ್ತು ಜಗತ್ತಿನ ಯಾವ ಮತವೂ ಬಡಜನರ ಹಾಗೂ ಕೀಳು ಜನರ ತಲೆಯಮೇಲೆ ಹಿಂದೂ ಮತದ ಹಾಗೆ ತುಳಿಯುವುದಿಲ್ಲ. ಇಂತಹ ಕೆಟ್ಟ ಕೆಟ್ಟ ಧರ್ಮಗಳಿಂದ ಸಮಾಜ ಪುರುಷನು ಕಳೆಗುಂದಿ ರಸಾತಲಕ್ಕೆ ಬೀಳುವನು. ಜಗತ್ತು ಇವರನ್ನು ನೋಡಿ ನಗುವುದು. ಅಸ್ಪೃಶ್ಯತೆಯು ಧರ್ಮವಲ್ಲ. ಅಂತಹ ತುಚ್ಛ ಭಾವನೆಗಳನ್ನು ಒದ್ದು ತೆಗೆದುಹಾಕಿ, ಅಸ್ಪೃಶ್ಯತೆಯ ಕೋಟೆಯನ್ನು ಹೊಡೆದು ಹೊರಗೆ ಬನ್ನಿ. ಎಲ್ಲ ಬಡವರೂ ಕೆಳಗೆ ತುಳಿಯಲ್ಪಟ್ಟವರೂ ಬನ್ನಿ ಎಂದು ಕರೆಯಲು ನಾನಿಚ್ಛಿಸುತ್ತೇನೆ ಎಂದರು



ಸ್ವಾಮಿವಿವೇಕಾನಂದರು. ಅವರ ಉನ್ನತಿಯಾದ ಹೊರತು ಭಾರತಾಂಬೆಯ ಉದ್ಧಾರವಾಗದು ಎಂದರು.

ಇಂಥ ಕೆಟ್ಟ ಧರ್ಮವನ್ನು ಕಿತ್ತು ಹಾಕುವುದಕ್ಕಾಗಿಯೇ ಮಹಾತ್ಮ ಗಾಂಧೀಜಿಯವರು ತಮ್ಮ ಜೀವನವನ್ನೇ ಬಲಿಯಾಗಿ ಅರ್ಪಿಸಲು ಸಿದ್ಧರಾಗಿರುತ್ತಾರೆ. ಅಸ್ಪೃಶ್ಯತೆಗೆ ಧರ್ಮದ ಆಧಾರವಿಲ್ಲ. ಅದು ಸೈತಾನನ ಯುಕ್ತಿಯಾಗಿದೆ ಎನ್ನುತ್ತಾರೆ. ಅಸ್ಪೃಶ್ಯತೆ ನಿಜವಾಗಿ ಪಿಶಾಚಿ ಧರ್ಮ. ಅದು ಮಾನವ ಸಮಾಜದ ಕಲ್ಯಾಣಕ್ಕಾಗಿಯಾಗಲಿ ಮಾನವರಿಗೆ ಯೋಗ್ಯವಾದ ಸಹಾನುಭೂತಿಯ ಸಲುವಾಗಿಯಾಗಲಿ ರಚಿತವಾಗಿರುವುದಿಲ್ಲ. ಸಮಾಜವನ್ನು ಹಾಳುಮಾಡಲು ಸೈತಾನನಿಂದ ಸೃಷ್ಟಿಯಾಗಿರುತ್ತದೆ. ಅದಕ್ಕಾಗಿಯೇ ಬಸವೇಶ್ವರನು ತನ್ನ ಸಮಾಜ ರಚನೆಯಲ್ಲಿ ಈ ಪಿಶಾಚಿ ಧರ್ಮಕ್ಕೆ ಸ್ಥಾನ ಕೊಡಲಿಲ್ಲ. ಅದನ್ನು ಒದ್ದು ಹೊರಗೆ ಹಾಕಿದನು. ಉಚ್ಚ ನೀಚತೆಯ ಭೇದ ಭಾವಗಳಿಗೆ ತಿಲಾಂಜಲಿಯನ್ನಿತ್ತನು. ವಿಶ್ವಪ್ರೇಮದ ಜ್ಯೋತಿಯು ಚಿತ್ತವನ್ನು ಶುದ್ಧಿಮಾಡಲಿ. ಆ ಜ್ಯೋತಿಯಿಂದ ಸಂಕುಚಿತತೆಯು ಸುಟ್ಟುಹೋಗಲಿ ಎಂದು ಅಸ್ಪೃಶ್ಯತಾ ನಿವಾರಣೆ ಮಾಡಿದನು ಅದನ್ನೇ ಇಲ್ಲಿ ಹಾಡಿರುತ್ತಾನೆ.

ದೇವದೇವಾ ನನ್ನ ಹೃದಯದ ಭಾವನೆಯನ್ನು ಕೇಳು. ಬ್ರಾಹ್ಮಣ ಮೊದಲಾಗಿ ಅಂತ್ಯಜರವರೆವಿಗೂ ಎಲ್ಲ ದೇವಭಕ್ತರನ್ನೂ ಒಂದೆಂದು ಭಾವಿಸುತ್ತಾನೆ. ಇದೇ ಭಾವನೆಯು ನನ್ನ ಮನಸ್ಸಿನ ಭಾವನೆಯಾಗಿರುತ್ತದೆ. ಈ ನುಡಿಗಳೊಳಗೆ ಎಳ್ಳು ಮೊನೆಯಷ್ಟು ವ್ಯತ್ಯಾಸಬಂದರೂ ನೀನು ಬೇಕಾದ ಶಿಕ್ಷೆಯನ್ನು ವಿಧಿಸು ಪರಮಾತ್ಮ ಎಂದು ಪ್ರತಿಜ್ಞಾಪೂರ್ವಕವಾಗಿ ನುಡಿದಿರುವನು.

---

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ, ಭವಬಂಧನವ ಬಿಡಿಸಿ ಪರಮ ಸುಖವ ತೋರಿದ ಗುರುವೇ, ಭವಿ ಎಂಬುದ ತೊಡೆದು ಭಕ್ತೆ ಎಂದೆನಿಸಿದ ಗುರುವೇ, ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು.

ನಿತ್ಯವೆನ್ನ ಮನೆಗೆ ನಡೆದು ಬಂದಿತ್ತು. ಮುಕ್ತಿ ಎನ್ನ ಮನೆಗೆ ನಡೆದು ಬಂದಿತ್ತು; ಜಯ ಜಯ ಗುರುವೇ, ನಮೋ ಪರಮ ಗುರುವೇ, ನಮೋ ನಮೋ, ಚನ್ನಮಲ್ಲಿಕಾರ್ಜುನನ ತಂದೆನಗೆ ತೋರಿಕೊಟ್ಟ ಗುರುವೇ ನಮೋ ನಮೋ.

ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆ. ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ. ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ. ಚನ್ನಮಲ್ಲಿಕಾರ್ಜುನಯ್ಯ, ನಾ ಹುಟ್ಟಲೊಡನೆ ವಿಭೂತಿಯ ಪಟ್ಟವ ಕಟ್ಟಿ ಸದ್ಗುರುಸ್ವಾಮಿ ಲಿಂಗ ಸ್ವಾಯತವ ಮಾಡಿದನಾಗಿ ಧನ್ಯಳಾದೆನು.

—ಮಹಾದೇವಿಯಕ್ಕ

# "ಶೋಷಣೆಯೇ ನಿನ್ನ ಹೆಸರು ಮಹಿಳೆ"

ಡಾ|| ಸಿ. ಅಶ್ವತ್.
ನಂ. 15, 18 ನೇ ಅಡ್ಡ ರಸ್ತೆ, ಕಬ್ಬನ್ ಪೇಟೆ, ಬೆಂಗಳೂರು-560002.

ಹುಟ್ಟಿದ ಮಗು ಹೆಣ್ಣೆಂದಾಗಲೇ ಕೆಲವರಿಗೆ ತಾತ್ಸಾರ. "ಅಯ್ಯೋ, ಬೋಟಿ ಹುಟ್ತಾ" ಎಂದು ಉದ್ಗರಿಸುವ ವೃದ್ಧರೂ ಇದ್ದಾರೆ. "ಎರಡು ಲಕ್ಷ ನಷ್ಟ ಆಯ್ತು," ಎಂದು ಲೆಕ್ಕಚಾರವಾಗಿ ಟೀಕಿಸುವ ವ್ಯಾಪಾರ ಮನೋಭಾವದವರೂ ಇದ್ದಾರೆ. "ನಾನಿಡುತ್ತಿರುವ ಗೋಳೇ ಸಾಕು ಅಂತಿದ್ದೆ, ಪುನಃ ನಿನ್ನ ಗೋಳನ್ನೂ ನೋಡಬೇಕಲ್ಲ," ಎಂದು ಗೋಳಾಡುವ ಮಾತೆಯರೂ ಇದ್ದಾರೆ. ಹುಟ್ಟಿದಾಗಿನಿಂದಲೂ ಸಾಯುವವರೆಗೂ ಅನೇಕ ಸಮಸ್ಯೆಗಳ ಶಿಶುವಾಗಿ, ಶೋಷಣೆಗೆ ಇನ್ನೊಂದು ರೂಪವಾಗಿ ಸಮಾಜದಲ್ಲಿ ಸೇವೆ ಮಾಡುತ್ತಲೇ ಸಾವನ್ನಪ್ಪುವುದಕ್ಕಾಗಿಯೇ ಮಗು ಹೆಣ್ಣಿನ ರೂಪದಲ್ಲಿ ಜನಿಸುತ್ತದೆ.

ಮಹಿಳೆಯು ಮಗುವಾಗಿದ್ದಾಗ ತಂದೆಯ ರಕ್ಷಣೆಯಲ್ಲೂ, ಮದುವೆಯ ನಂತರ ಗಂಡನ ರಕ್ಷಣೆಯಲ್ಲೂ, ವಯಸ್ಸಾದ ಮೇಲೆ ಮಗನ ರಕ್ಷಣೆಯಲ್ಲೂ ಇರಬೇಕಾದವಳು. ಹಾಗೂ ಸ್ವಾತಂತ್ರ್ಯಕ್ಕೆ ಅರ್ಹತೆ ಇಲ್ಲದವಳು ಎಂಬ ಕುರುಡು ಕಲ್ಪನೆ ಅನಾದಿ ಕಾಲದಿಂದಲೂ ರೂಢಿಯಲ್ಲಿತ್ತು. ಕೆಲವು ಜನಾಂಗವು ಪುರುಷರ ಸಮಾನ ಪೂಜಾದಿಗಳಿಗೂ ಅರ್ಹಳಲ್ಲವೆಂದು ಹಿಂದೆ ತಳ್ಳಿತ್ತು. ಅನೇಕ ಸಮಾಜ ಸುಧಾರಕರು ಇಂತಹ ಶೋಷಣೆಯನ್ನು ಖಂಡಿಸಿದರು. ಇವರುಗಳಲ್ಲಿ "ಜಗಜ್ಯೋತಿ ಬಸವೇಶ್ವರರು," ಪ್ರಮುಖರೆನ್ನಬಹುದು. ಸುಮಾರು ಎಂಟುನೂರು ವರ್ಷಗಳಷ್ಟು ಹಿಂದೆಯೆ ಮಹಿಳೆಯರಿಗೆ ಪುರುಷರೊಡನೆ ಸಮಾನ ಸ್ಥಾನವನ್ನು ಗಳಿಸಿಕೊಡಲು ಶ್ರಮಿಸಿದರು. ಪೂಜಾ ವಿಧಿಗಳಲ್ಲಿ, ಸಭೆ ಸಮಾರಂಭಗಳಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀ ಪುರುಷರನ್ನು ಸರಿ ಸಮಾನವಾಗಿ ಪರಿಗಣಿಸಿದರು. ಅಂದು ಕಲ್ಯಾಣದಲ್ಲಿ ಹಚ್ಚಿದ ಜ್ಯೋತಿ ಇಂದು ವಿಶ್ವದಾದ್ಯಂತ ಜ್ವಾಜ್ವಲ್ಯಮಾನವಾಗಿ ಬೆಳಗುತ್ತಿದೆ. ಮಹಿಳೆಯ ಸ್ಥಾನಮಾನಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಿರುವುದರಿಂದ ಸಂಕೇತವಾಗಿ ಇಂದು ಸ್ತ್ರೀ ಪುರುಷರಲ್ಲಿ ಸಮಾನತೆ ಸ್ವಲ್ಪಮಟ್ಟಿಗೆ ಏರ್ಪಟ್ಟಿದೆಯೆನ್ನಬಹುದು. ಆದರೂ ಇನ್ನು ಪ್ರಗತಿ ಸಾಧಿಸಬೇಕಾಗಿದೆ. ಈ ದಿಸೆಯಲ್ಲಿ ಶ್ರಮಿಸುವವರು ಅಭಿನಂದನಾರ್ಹರು.

ವರದಕ್ಷಿಣೆಯ ಪಿಡುಗನ್ನು ಹಿಡಿಬಿನಂತೆ ಬುಡಸಮೇತ ಕಿತ್ತಿಸಯುಬೇಕಾಗಿದೆ.
ಕನ್ಯೆ; ವಿವಾಹಿತ ಮಹಿಳೆ ಹಾಗೂ ವಿಧವೆಯರಲ್ಲಿ ಯಾವ ವ್ಯತ್ಯಾಸವು ಕಾಣ
ದಂತೆ ಮಂಗಳ ಚಿಹ್ನೆಗಳನ್ನು ಎಲ್ಲ ಮಹಿಳೆಯರೂ ತಮ್ಮ ಇಚ್ಛೆ ಬಂದಂತೆ
ಉಪಯೋಗಿಸುವಂತಾಗಬೇಕು. ಪುರುಷನು "ಯಜಮಾನ" ಎಂಬ ಭಾವನೆ
ಹೋಗಿ "ಜೀವನದ ಪಾಲುದಾರ" ಎಂದು ತಿಳಿಯಬೇಕು. ಗಂಡು ತನ್ನ ಹೆಂಡತಿ
ಯನ್ನು ಏಕವಚನದಲ್ಲೂ ಹಾಗೂ ಹೆಂಡತಿಯು ಗಂಡನನ್ನು ಬಹುವಚನದಲ್ಲೂ
ಕರೆಯುವ ಪದ್ಧತಿ ನಿರ್ಮೂಲವಾಗಿ ಒಬ್ಬರನ್ನೊಬ್ಬರು ಮಿತ್ರರಂತೆ ಸಂಬೋಧಿಸು
ವಂತಾಗಬೇಕು.

ಗಂಡನ ದುಡಿಮೆ ಹೊರಗಡೆಯಾದರೆ ಹೆಂಡತಿಯ ದುಡಿಮೆ ಮನೆಯೊಳ
ಗಡೆ ಇರುತ್ತದೆ. ಆದುದರಿಂದ ದುಡಿಮೆ ದೃಷ್ಟಿಯಿಂದ ಸ್ತ್ರೀ ಪುರುಷರಿಬ್ಬರೂ
ಸಮಾನರು ಹಾಗೂ ಒಬ್ಬರಮೇಲೊಬ್ಬರು ಅವಲಂಬಿಗಳು. ಮಹಿಳೆಯು ಹೊರ
ಗಡೆ ದುಡಿದು ಹಣ ಗಳಿಸುವಂತಹವಳಾದರೆ ಗಂಡಸು ಮನೆಯ ಕೆಲಸಗಳಲ್ಲಿ
ಅಷ್ಟೆ ಪ್ರಮಾಣದಲ್ಲಿ ಭಾಗಿಯಾಗಬೇಕು. ಇಬ್ಬರೂ ಹೊರಗಡೆ ದುಡಿಯುವವ
ರಾದರೆ ಮನೆಗೆಲಸಕ್ಕೆ ಸೇವಕರನ್ನು ನೇಮಿಸಿಕೊಳ್ಳಬೇಕು. ಇಂದು ಅನೇಕ
ದುಡಿಯುವ ಮಹಿಳೆಯರು ತಮ್ಮ ಹೊರಗಿನ ಕೆಲಸದ ಜೊತೆಗೆ ಮನೆಗೆಲಸದ
ಭಾರವನ್ನು ಹೊತ್ತು ಜರ್ಝರಿತರಾಗುತ್ತಿರುವುದು ಶೋಚನೀಯ ಸಂಗತಿಯಾಗಿದೆ.
ಸಮಾಜದ ಅರ್ಧದಷ್ಟು ಜನಸಂಖ್ಯೆಯುಳ್ಳ ಮಹಿಳೆಯರಿಗೆ ಚುನಾವಣೆ
ಯಲ್ಲಿ ಹಾಗೂ ಆಡಳಿತಾಂಶಗಳಲ್ಲಿ ಸೂಕ್ತ ಪ್ರಾತಿನಿಧ್ಯ ನೀಡಬೇಕಾಗಿದೆ.

ವೇಶ್ಯಾವೃತ್ತಿಯ ಕಬಂಧ ಬಾಹುಗಳನ್ನು ತುಂಡರಿಸಲು ಉಗ್ರ ಕ್ರಮ
ಕ್ಕಾಗಿ ಕಾನೂನಿನಲ್ಲಿ ಅವಕಾಶ ಕಲ್ಪಿಸಿಕೊಡಬೇಕಾಗಿದೆ. ಮಹಿಳೆಯರ ಮಾನಭಂಗ,
ಶೀಲ ಅಪಹರಣ...... ಮುಂತಾದ ಸಮಾಜ ಘಾತಕ ಕೃತ್ಯಗಳಿಗೆ ಘೋರತರ
ವಾದ ಕಠಿಣ ಶಿಕ್ಷೆ ವಿಧಿಸುವಂತಾಗಬೇಕಾಗಿದೆ. ವಿಧವಾ ವಿವಾಹಕ್ಕೆ ಎಲ್ಲ
ಬಗೆಯ ಪ್ರೋತ್ಸಾಹ ಸಿಗಬೇಕಾಗಿದೆ.

ಹೀಗೆ ಸಮಾಜದಲ್ಲಿ ಶೋಷಣೆಗೆ ಇನ್ನೊಂದು ಹೆಸರಾಗಿರುವ ಮಹಿಳೆ
ಯನ್ನು ಅದರಿಂದ ಪಾರುಮಾಡಿ ಪುರುಷರ ಸಮಾನವಾದ ಸ್ಥಾನಮಾನಗಳನ್ನು
ಹಾಗು ಸವಲತ್ತುಗಳನ್ನು ದೊರಕಿಸುವ ಮೂಲಕ ಜಗತ್ತಿಗೆ ಬಸವೇಶ್ವರರ ತತ್ವ
ಗಳ ಮಹತ್ವವನ್ನು ಎತ್ತಿ ತೋರಿಸೋಣ.

●



# ಏಕಾದಶಿ ವ್ರತ ವಿಜ್ಞಾನ

—ಶ್ರೀ ಅನಂತ ಚಿಂತಾಮಣಿ ಜ್ಯೋತಿಷೀ
ಶ್ರೀ ನವದುರ್ಗಾ ಪ್ರಸಾದ ನಿಲಯ ಬಣಗಾ, ಅಂಚೆ ಬಣಗ ೫೮೧೩೦೭ ಕಾರವಾರ, ಕರ್ನಾಟಕ.

ನಮ್ಮ ಪ್ರಾಚೀನ ಮಹಾನುಭಾವರು ವೈಜ್ಞಾನಿಕ ವಿದ್ವಾಂಸರಾಗಿದ್ದರು.,
ಇದರಲ್ಲಿ ಎಳ್ಳಷ್ಟು ಸಂದೇಹವಿಲ್ಲ, ಅವರು ತಮ್ಮ ಸಲುವಾಗಿ ಯಾವುದನ್ನು
ಕರ್ತವ್ಯತಾ ರೂಪದಿಂದ ಮಾಡಿದ್ದಾರೋ ಅವುಗಳ ರಹಸ್ಯ ಪ್ರಕಟಿಸಲಿಲ್ಲ. ಅವು
ಗಳ ರಹಸ್ಯವನ್ನರಿತ ಇಂದಿನ ಪಂಡಿತರು ಅವರ ವಿದ್ವತ್ತನ್ನವಲೋಕಿಸಿ ಆಶ್ಚರ್ಯ
ದಿಂದ ಮೂಗಿನ ಮೇಲೆ ಬೆರಳನ್ನು ಇಡುತ್ತಾರೆ,

ಏಕಾದಶಿ ಮಹಾತ್ಮೆಯ
ಶುಕ್ಲ ಹಾಗೂ ಕೃಷ್ಣ ಪಕ್ಷಗಳಲ್ಲಿ ಬರುವ ಏಕಾದಶಿ ಮಹಾತ್ಮೆಯ
ಉಪೋಷಣದ ವಿವರಣೆ ಕಾರ್ತಿಕ ಮಹಾತ್ಮದ ೧೭ನೇಯ ಅಧ್ಯಾಯದಲ್ಲಿ ಈ
ರೀತಿ ಹೇಳಿದ್ದಾರೆ.

"ಏಕಾದಶಿಯು ಮಕ್ಕಳಿಗ ತಾಯಿಯಂತೆ ರೋಗಿಗೆ ಔಷಧದಂತೆ ರಕ್ಷಿಸು
ತ್ತದೆ. ಹನ್ನೊಂದು ಇಂದ್ರಿಯಗಳಿಂದುಂಟಾದ ಪಾಪಗಳನ್ನು ಹತ್ತಿಕ್ಕಲು ಏಕಾ
ದಶಿ ವ್ರತ ಉಪೋಷಣ ಮಾಡಿ ಸ್ವರ್ಗಕ್ಕೆ ಹೋಗುತ್ತಾರೆ. ಏಕಾದಶಿಯು
ಮಹಾಪಾತಕ ನಾಶಕವು.

ಆಧುನಿಕ ಮಾನವನು ಪಾಶ್ಚಾತ್ಯರ ಕೆಟ್ಟ ಸಂಸ್ಕೃತಿಗೆ ಮರುಳಾಗಿ ಈ
ವ್ರತ ಉಪೋಷಣೆ ನೋಡಿ ಗೇಲಿ ಮಾಡ ಹತ್ತಿದ. ವ್ರತ ಉಪೋಷಣಗಳು
ಪ್ರಾಚೀನ ಮಹಾನುಭಾವರ ಕ್ರೂರತೆಯ ಸಂಕೇತ ಎಂದು ಕೆಲವರು (ಅ)
ವಿದ್ಯಾವಂತರು ದೂರಿದರು. ಆದರೆ ಪಾಶ್ಚಾತ್ಯ ವಿಜ್ಞಾನಿಗಳು ವ್ರತ ಉಪೋಷಣದ
ಲಾಭವನ್ನು ಹೇಳಿದಾಗ ಆರ್ಯ ಜನರು ನತಮಸ್ತಕರಾಗಿ ಪಾಲಿಸ ಹತ್ತಿದರು.

ಉಪೋಷಣವು ಮಾನವರ ಸಲುವಾಗಿ ಉಚಿತ ಔಷಧವಾಗಿದೆ. ಉಪೋಷ
ಣವು ರೋಗದ ಬೀಜವನ್ನು ಸುಟ್ಟು ಕಶ್ಮಲಗಳನ್ನು ಒಳಗಿನಿಂದ ಹೊರದೂಡಿ
ಶರೀರವನ್ನು ಕಾಪಾಡುತ್ತದೆ. ಪಚನ ಕ್ರಿಯೆಗಳಿಂದ ಶಕ್ತಿಯನ್ನೀಡಿ ದುಃಖವನ್ನು
ಮರೆತರೆ ಪಾಪವಿರುವುದಿಲ್ಲ. ವ್ರತ ನಿಯಮದ ಅನುವರ್ತನದಿಂದ ಶರೀರವು
ಅಭ್ಯಸ್ತವಾಗಿ ಪ್ರಾಕೃತಿಕವಾಗಿ ಸ್ವಸ್ಥದಿಂದಿರುತ್ತದೆ. ಏಕಾದಶಿ ಶಬ್ದದಿಂದ ಏಕಾ

ದಶ ಇಂದ್ರಿಯಗಳ ವಿಶಿಷ್ಟ ವಿಷಯಗಳ ಉಪವಾಸ ಉಪೋಷಣವು ಸೂಚಿತ
ವಾದ ಅರ್ಥವಿರುತ್ತದೆ. ಇದರಿಂದ ದರ್ಶನ, ಸ್ಪರ್ಶನ ಇತ್ಯಾದಿ ಅನಿವಾರ್ಯ
ವಿಷಯಗಳ ನಿಷೇಧವಿಲ್ಲವಾದರೂ ಆ ಇಂದ್ರಿಯಗಳಿಂದ ವೈಷಯಿಕ ಆಸ್ವಾದ
ದರ್ಶನ ಸ್ಪರ್ಶನ ಶ್ರವಣ ಇತ್ಯಾದಿ ನಿರೋಧ ಮಾಡುವುದೇ ಸೂಚನೆಯು
ಹಾಣಿಯ ನಿರೋಧವು ಮೌನವೆಂಬ ತಪವು .ಮುನಿರ್ ಭಾವೋ ಮೌನಂ ಎಂದರೆ
ಮೌನದಿಂದ ಮುನಿತ್ವವು ಪ್ರಾಪ್ತವಾಗುತ್ತದೆ. ಮುನಿಗಳು ಸ್ನಾನ ದಾನಗಳಿಂದ
ಭಗವತ್ ಪೂಜೆ ನಾಮಾಮೃತ ಕೀರ್ತನೆ ನೃತ್ಯ ಪುರಾಣಶ್ರವಣ ವಿವರಿಸಿದ್ದಾರೆ.

ಅಮಾವಾಸ್ಯೆ ಪೌರ್ಣಿಮೆಯಲ್ಲಿ ಸೂರ್ಯ ಚಂದ್ರ ಸಂಬಂಧ ವಿಶೇಷ
ರೀತಿಯದು. ಇದು ಪೃಥ್ವಿಯ ಮೇಲೆ ಪ್ರಭಾವ ಬೀರುವುದರಿಂದ ಆಹಾರ
ಸೇವಿಸಿ ; ಜಠರಾಗ್ನಿಯ ಮೇಲೆ ಕೆಟ್ಟ ಪರಿಣಾಮವುಂಟಾಗಿ ರೋಗ ಸಂಭವಿ
ಸುತ್ತದೆ.

ದಶಮಿಯ ರಾತ್ರಿಯಲ್ಲಿ ಊಟ ಮಾಡಬಾರದು. ಇಲ್ಲವೆ ದಶಮಿ ದಿನ
ಲಘು ಭೋಜನ ಮಾಡಬಹುದು. ಮರುದಿನ ಏಕಾದಶಿ ದಿನ ಸಂಪೂರ್ಣ ನಿರಾ
ಹಾರಿಗಳಾಗಿದ್ದು ದ್ವಾದಶಿ ದಿನ ಲಘು ಭೋಜನ. ಇದರಿಂದ ಶರೀರ ಶೋಧನೆ
ಯುಂಟಾಗುತ್ತದೆ.

[ವ್ರತ] ಉಪೋಷಣದಿಂದ ಮಾರಕ ಸಿದ್ಧಿಯಾಗುವುದು.

ಉಪವಾಸದಿಂದ ಯಾರೂ ಸಾಯಲಾರರು. ಹೆಚ್ಚು ಆಹಾರ ಸೇವಿಸುವರೆ
ಸಾಯುವರು. ಉಪೋಷಣವು ಪಾಚಕ ಔಷಧವಾಗಿದ್ದು ಒಳಗಿನ ಕಶ್ಮಲಗಳನ್ನು ಹೊರ
ಹಾಕಲು ಸದಾ ಶ್ರಮಿಸುತ್ತದೆ. ಪ್ರತಿ ವರ್ಷದಲ್ಲಿ ಏಕಾದಶಿ ಇತ್ಯಾದಿ ಉಪವಾಸ
ಮಾಡುವುದರಿಂದ ರೋಗವು ಉತ್ಪನ್ನವಾಗದು. ಸದಾ ಆಹಾರ ಸೇವಿಸಿದವನ
ಎಂದೂ ಉಪವಾಸ ಇರದವನ ಮೇಧಸ್ಸು ಕೊಬ್ಬು ಬೆಳೆದು ತರ ತರದ ರೋಗ
ಗಳಿಗೆ ತುತ್ತಾಗುವನು. ನಿತ್ಯ ದೌರ್ಬಲ್ಯದ ನಿವಾರಣೆಗಾಗಿ ವೈದ್ಯರು ಅನೇಕ
ಔಷಧಿ ಸೇವಿಸುವರು. ಔಷಧವನ್ನು ನೀಡಿದಾಗ ಒಳಗಿನ ವಿಷವು ಬೆಳೆಯುತ್ತ
ಹೋಗುತ್ತದೆ ವ್ರತ ಉಪೋಷಣದಿಂದ ರೋಗವು ನಶಿಸಿ ಮೆದುಳು ಚುರುಕಾಗಿ
ವಿಚಾರಮಾಡುವ ವಾಸ್ತವಿಕ ಹಸಿವನ್ನು ಉಂಟುಮಾಡುತ್ತದೆ. ಈ ರೀತಿ ಮಾನ
ಸಿಕವಾಗಿ ಶುದ್ಧತೆಯನ್ನು ಹಾಗೂ ಪ್ರಸನ್ನತೆಯನ್ನು ಪಡೆಯಲು ಏಕಾದಶಿ
ಉಪೋಷಣವು ಸಹಾಯ ಮಾಡುತ್ತದೆ. ನಾವು ತಿನ್ನುವ ಅಪಕ್ವಾಂಶವು ಅಪಚ
ನಾಂಶವು ಶರೀರದೊಳಗೆ ಅಡಗಿ ಕೂತಿರುತ್ತದೆ. ನಾವು ಪದೇ ಪದೇ ಆಹಾರ
ಸೇವಿಸಿದರೆ ಶಾರೀರಿಕ ಕ್ರಿಯೆಗಳಿಗೆ ಹೆಚ್ಚಿನ ಕೆಲಸ ಬೀಳುತ್ತದೆ. ವಿಶ್ರಾಂತಿಯೂ
ಇಲ್ಲವೆ ಹೆಚ್ಚಿಗೆ ಸೇವಿಸಿದ ಆಹಾರವು ವಿಷವಾಗಿ ಶರೀರದ ಎಲ್ಲ ಭಾಗಗಳಿಗೆ
ಹೋಗುತ್ತದೆ. ಜತೆಯಲ್ಲಿ ಮನೋ ಏಕಾಗ್ರತೆಗೆ ಭಂಗ ತರುತ್ತದೆ.



ಜ್ವರದ ಆರಂಭದಲ್ಲಿ ಲಂಘನ ಮಾಡಬೇಕು ಮಧ್ಯದಲ್ಲಿ ಔಷಧದಲ್ಲಿ ಸೇವನೆ,
ಅಂತ್ಯದಲ್ಲಿ ಪಾಚನ (ಉಪವಾಸ) ಉಪೋಷಣದ ಮಹತ್ವವು ಮಾನವನಿಗಷ್ಟೇ
ಅಲ್ಲ ಪಶು ಪಕ್ಷಿಗಳು ಅರಿತಿದ್ದಾವೆ ಅಚೇತವಸ್ತುಗಳಿಗೂ ಅರಿವಿದೆ ಪಶು ಪಕ್ಷಿಗಳು
ರೋಗಗ್ರಸ್ತವಾದಾಗ ಅವುಗಳು ತಿಂಡಿ ನೀಡಿದರೆ ತಿನ್ನಲಾರದು. ಅಚೇತ ಅಂದರೆ
ಭೂಮಿಯು ಕೃಷಿಯ ಸಲುವಾಗಿ ಸದಾ ಉಪಯೋಗಕರ ಪೃಥ್ವಿಯು ದೊಡ್ಡ
ದೊಡ್ಡದಾದಂತೆ ಅದರ ಉಪವಾಸವು ವಿಶಾಲವಾದ ವ್ಯಾಪ್ತಿಯನ್ನು ಪಡೆದಿದೆ.
ವರ್ಷದಲ್ಲಿ ಆರು ತಿಂಗಳು ಉಪವಾಸ ಮಾಡಿದರೆ ಭೂಮಿಯ ಉತ್ಪಾದನಾ
ಶಕ್ತಿ ಹೆಚ್ಚುತ್ತದೆ.

ವ್ರತದಿಂದ ಲೌಕಿಕ ಲಾಭವುಂಟಾಗುತ್ತದೆ. ಮನೆಯಲ್ಲಿಯ ವ್ಯಕ್ತಿಗಳು
ತಿಂಗಳಿಗೆ ಎರಡಾವರ್ತಿ ವಿಧಿಯುಕ್ತವಾಗಿ ಉಪೋಷಣ ಮಾಡಿದರೆ ಆಹಾರದ ಮಿತ
ಉಪಯೋಗವಾಗುವುದು. ಉಳಿದ ಅನ್ನವನ್ನು ಹಸುವಿನಿಂದ ಬಳಲುತಿದ್ದವರಿಗೆ
ನೀಡಿದರೆ ದೇಶದಲ್ಲಿ ಅನ್ನದ ಅಭಾವ ಕೊಂಚಮಟ್ಟಿಗೆ ಕಡಿಮೆಯಾಗುತ್ತದೆ. ಹಸು
ವಿನ ಕಷ್ಟವನ್ನು ಸಹಿಸುವುದರಿಂದ ಇನ್ನೊಬ್ಬರ ಹಸಿವನ್ನು ಅರಿಯುವನು.

ಹಸಿವಿನಿಂದ ಕಷ್ಟವನ್ನು ಸಹಿಸುವುದಕ್ಕೆ ತಪವೆಂದು ಪ್ರಾಜ್ಞರು ಹೇಳುತ್ತಾರೆ
ಈ ತಪದಿಂದ ಪಾಪವು ನಶಿಸುತ್ತದೆ ಪಾಪದ ಪರಿಣಾಮವೇ ದುಃಖವು ಶಕ್ತಿ
ಯನ್ನು ಹೆಚ್ಚಿಸುತ್ತದೆ. ಯಾವನು ವ್ರತ ಉಪೋಷಣದಿಂದ ಶರೀರದ ಅಥವಾ
ಮನಸ್ಸಿನ ಶೋಧನೆ ಮಾಡುವುದಿಲ್ಲವೋ ಅವನಲ್ಲಿ ತನ್ಮಯತೆಯಿರುವುದಿಲ್ಲ ಕಾರಣ
ಸಾತ್ವಿಕ ಗುಣವಿರದೆ ಅವರಲ್ಲಿ ತಮೋ ಗುಣವು ಬೆಳೆಯುತ್ತ ಹೋಗುತ್ತದೆ
ಪ್ರಾಚೀನ ಕಾಲದಲ್ಲಿ ಮುನಿಗಳು ದೇವತಾರಾಧನೆಯಲ್ಲಿ ತನ್ಮಯತೆ ಸಿದ್ಧಿಸಿ ಮಿತಾ
ಹಾರ ಅಪೇಕ್ಷಿಸುತ್ತಿದ್ದರು

ಕಶ್ಮಲ ನಶಿಸಲು ಅಪಚನಾಂಶಗಳನ್ನು ದಹಿಸಲು,
ಭೀಕರ ಅಪಕ್ವಾಂಶವಾಗಲಿ ಅಪಚನಾಂಶಗಳನ್ನು ದಹಿಸಲು, ಕಶ್ಮಲ ನಶಿಸಲು
ವ್ರತ ಉಪೋಷಣವು ರಾಮ ಬಾಣದಂತಿದೆ. ಸ್ನಾನ ದಾನ ಪೂಜನ ಇವುಗಳ
ಜೊತೆಯಲ್ಲಿ ವ್ರತೋಪವಾಸ ಮಾಡುವುದರಿಂದ ಸದ್ಭಾವನೆ, ಪರೋಪಕಾರತೆಯು
ಗುಣ ಸತ್ಯನಿಷ್ಠತೆಯೂ ಇರುತ್ತದೆ.

ಈ ಪ್ರಕಾರ ಏಕಾದಶಿ ಉಪೋಶಣವು ತೀರ ಅವಶ್ಯಕವಾಗಿರುತ್ತದೆ.
ಮೊದ ಮೊದಲು ಕಠಿಣತೆ ಕಂಡುಬಂದರೂ ಕೂಡ ನಂತರ ಸುಲಭವಾಗುತ್ತದೆ.

ಶ್ರೀಭಗವದ್ಗೀತೆ ಇತ್ಯಾದಿ ಅನೇಕ ಧಾರ್ಮಿಕ ಗ್ರಂಥದಲ್ಲಿ ಹೇಳಿದಂತೆ ವ್ರತ
ಉಪೋಷಣೆ ಮಾಡಿ ಭಗವನ್ನಾಮ ಸ್ಮರಣೆ ಮಾಡುವಾ.

# ತಳಿರು—ತೋರಣ

(ಸಾಮಾಜಿಕ ಕಿರು ಕಾದಂಬರಿ)

—ಎನ್. ಎಸ್. ಗದಗಕರ, ಶುಕ್ರವಾರ ಪೇಟೆ, ನವಲೂರು ಅಗಸೆ, ಧಾರವಾಡ.

ಆಚಾರ್ಯರು ಕೇವಲ ವೈದಿಕ ಬ್ರಾಹ್ಮಣ, ಮಠದ ಪೂಜಾರಿ ಆಗಿರದೆ ಆ ಹರಿಶ್ಚಂದ್ರ ಘಾಟನಲ್ಲಿ ಒಂದು ಪ್ರಭಾವಿ ಶಕ್ತಿ ಅನಿಸಿದ್ದರು ಹಿಂದು ಮುಸ್ಲಿಂ ಎರಡೂ ಜನಾಂಗಗಳನ್ನು ಕೂಡಿಸುವ ಸ್ವರ್ಣ ಸರಪಳಿಯಂತಾಗಿದ್ದರು ಹಾಗೆ ನೋಡಿದರೆ ಎರಡೂ ಜನಾಂಗಗಳು ಅಲ್ಲಿ ಜಾಗ್ರತವಾಗಿದ್ದವು. ಯಾವ ಕ್ಷುಲ್ಲಕ ಕಾರಣಕ್ಕಾಗಿ ಅಲ್ಲಿ ದಂಗೆಗಳೇಳುವವೊ ಯಾರಿಗೂ ಗೊತ್ತಾಗುವಂತಿರಲಿಲ್ಲ. ಒಂದು ನಿಮಿತ್ತ ಸಿಕ್ಕರೆ ಸಾಕು ಬುಗಿಲ್ಲೆಂದು ಕೋಪಾಗ್ನಿ. ತಕ್ಷಣ ಎರಡೂ ಜಾತಿಯ ಜನ ಲಾಠಿ ತೆಗೆದುಕೊಂಡು ಹೊರ ಬೀಳುವದೇ ಭರ ಬೀದಿಗೆ!

ಆಚಾರ್ಯರು ಈ ಮುಸ್ಲಿಂರಿಗೂ ಆದರಣೀಯ ಎಂಬುದು ಶ್ರೀಕಾಂತನಿಗೆ ಅಲ್ಲಿದ್ದಾಗ ತಿಳಿಯಿತು. ಆಚಾರ್ಯರು ಅದೇ ಮುಂಜಾವಿನ ಆಹ್ನಿಕ ತೀರಿಸಿ ಒಮ್ಮೆ ಮಠದ ಕಟ್ಟೆಯ ಮೇಲೆ ನಿಂತಿದ್ದರು. ಅಷ್ಟರಲ್ಲಿ ಮುಸ್ಲಿಂ ಬಂಧುಗಳ ಮದುವೆಯ ಮೆರವಣಿಗೆ ಹೊರಟಿತ್ತು. ಆಚಾರ್ಯರ ಮಠದ ಬಳಿಗೆ ಅದು ಬರಲು ಆ ವರನಾದ ಬಂಧು ಕುದುರೆಯಿಂದ ಕೆಳಗಿಳಿದು ಬಂದ ವಧುವೂ ಬುರ್ಖಾ ಸರಿಸಿ ಇಳಿದಳು. ಈರ್ವರೂ ನೇರವಾಗಿ ಬಂದು ಆಚಾರ್ಯರ ಪಾದ ಮುಟ್ಟಿ ನಮಸ್ಕರಿಸಿದರು. ಅವರೂ ಮನಸಾ ಆಶೀರ್ವದಿಸಿದರು ಮುಂದೆ ಊಟಕ್ಕೆ ಕೂಡ್ರುವಾಗ ಅವರು ಇನ್ನೊಂದು ಸ್ನಾನ ಮಾಡಿರಬಹುದು—ಯುವನ ದಂಪತಿಗಳು ಕಾಲು ಮುಟ್ಟಿ ನಮಸ್ಕರಿಸಿದರು ಎಂದು ಇರಲಿ.

ರವಿಶಂಕರಪ್ಪನ ಶ್ರೀಕಾಂತನ ನಲ್ಮೆಯ ಗೆಳೆಯ. ತಾನು ಹೋದಲ್ಲೆಲ್ಲ ಶ್ರೀಕಾಂತನು ಕಾಶಿಯಲ್ಲಿ ಗೆಳೆಯನನ್ನು ಕರೆದೊಯ್ಯುವವನೇ. ಚಹದ ಅಂಗಡಿಗೆ ಶ್ರೀಕಾಂತನು ಹೋದರೆ ಅವನು ಬಳಿಗೆ ಬಂದು ಕೂಡ್ರುತ್ತಿದ್ದ. ಆದರೆ ಏನೂ ತಿನ್ನುತ್ತಿರಲಿಲ್ಲ. ಕುಡಿಯುತ್ತಿರಲ್ಲಿಲ. ಏನೋ ನಿಯಮ ಪರಿಪಾಲಿಸಿದ್ದನು. ಇವನ ಸಹವಾಸದಿಂದಲೆ ಶ್ರೀಕಾಂತನ ಕಾಶಿಯ ಪ್ರಮುಖ ಬೀದಿಗಳಲ್ಲೆಲ್ಲ ಸಂಚರಿಸಿ ಬರುತ್ತಿದ್ದನು ಏನು ತಪ್ಪಿದರೂ ತಪ್ಪಿತು. ಆದರೆ ಪ್ರತಿನಿತ್ಯ ಇಬ್ಬರೂ ವಿಶ್ವೇಶ್ವರ ದೇವಾಲಯಕ್ಕೆ ಹೋಗುವದನ್ನು ಮರೆಯುತ್ತಿರಲಿಲ್ಲ. ಆ ಉದ್ದ ಈ ಉದ್ದ ದಾರಿ ಮೂಕ ತನದಿಂದ ಸವೆಯುತ್ತಿರಲಿಲ್ಲ ಕಾಶಿ ವಿಶ್ವವಿದ್ಯಾನಿಲಯದ ಹೆಬ್ಬಾಗಿಲದಲ್ಲಿಯೆ ಪಂಡಿತ ಮಾಲವಿಯಾಜ

ಕಂಚಿನ ಮೂರ್ತಿಯನ್ನು ಕಂಡಾಗಂತೂ ರವಿಶಂಕರನಿಗೆ ತಡೆಯಲಾಗಲಿಲ್ಲ — ಭವ ನಿರ್ಭರತೆಯ ಮೂಲಕ ಅಲ್ಲಿಯ ಬಳಿಯ ಸಾರ್ವಜನಿಕ ಉದ್ಯಾನದಲ್ಲಿ ಇಬ್ಬರೂ ಕುಳಿತರು. ಆಗ ರವಿಶಂಕರ ಮಾಲವಿಯಾಜಿ ಅವರ ಜೀವನ ವೃತ್ತಾಂತವನ್ನು ವಿವರಿಸಿದ. ಕೇಳಿ ಶ್ರೀಕಾಂತ ಧಕ್ಯಾದ

ಜನತೆ ಕೂಡ ಪಂಡಿತರನ್ನು ಪರೀಕ್ಷಿಸಿ ಅವರ ಗೊಡವಿಗೆ ಬರುವದನ್ನು ಬಿಚ್ಚಿತ್ತಂತೆ. ಒಮ್ಮೆ ಹರಿಜನರೆಲ್ಲ ಮಾಲವಿಯಾಜಿಗೆ ಗಂಟುಬಿದ್ದರು—ನಮ್ಮನ್ನು ಹಿಂದೂಗಳನ್ನಾಗಿಸಿರೆಂದು. ಇದೇನೋ ಯೂರದೊ "ಭುಲತಾಪೆ" ಎಂದು ಪಂಡಿತರಿಗೆ ಸಂಶಯಬಂದಿತು. ಎಲ್ಲರನ್ನೂ ಸಭೆಯಲ್ಲಿ ಸೇರಿಸಿ ನುಡಿದರು—ಅಯ್ಯೋ ಬಂಧುಗಳೆ, ನೀವುಹಿಂದೂಗಳಾಗಲು ನನಗೆ ಸಮ್ಮತಿ ಇದೆ. ನಾಳೆನಿಂದ ಪ್ರತಿದಿನ ನೀವು ಹನುಮಾನ್ ಘಾಟಿಗೆ ಮುಂಜಾವು ನಾಲ್ಕಕ್ಕೆ ಬನ್ನಿರಿ. ಸ್ನಾನ ತೀರಿಸಿ ಕೂಡಿರಿ. ನಾನು ಮಂತ್ರ ಹೇಳುವೆ. ಯಜ್ಞೋಪವೀತ ಹಾಕಿಕೊಂಡು ಸೂರ್ಯನಿಗೆ ಅರ್ಘ್ಯ ಸಲ್ಲಿಸುವಿರಂತೆ. ಮೂರು ದಿನ ಹೀಗೆ ಮಾಡುವಲ್ಲಿ ಆ ಹರಿಜನ ಮಂಡಳಿ ಬೇಸತ್ತಿತು. ಎಲ್ಲಿಯ ಹಿಂದೂತ್ವ! ನಮಗೇಕೆ ಆ ಹವ್ಯಾಸ! ಹೀಗೆಯೇ ಇರುವಾ ಗಾಂಧೀಜಿಯ ಪ್ರಿಯ ಪರಿವಾರವಾಗಿ ಎಂದು ಆ ವಿಚಾರವನ್ನು ಬಿಟ್ಟು ಕೊಟ್ಟಿತಂತೆ!

ಇದೇ ಪಂಡಿತರು ಸಿರಿವಂತನೊಬ್ಬನ ಮನೆಗೆ ಹೋಗಿದ್ದರಂತೆ ಒಮ್ಮೆ – ತಾವು ಆರಂಭಿಸಲಿರುವ ವಿಶ್ವವಿದ್ಯಾನಿಲಯಕ್ಕೆ ದೇಣಿಗೆ ಕೇಳಲು. ಒಳಗೆ ತಂದೆ ಐದು ನಯ ಪೈಸೆ ಹೆಚ್ಚು ವೆಚ್ಚಮಾಡಿದ್ದಕ್ಕಾಗಿ ಮಗನನ್ನು ದಂಡಿಸುತ್ತಿದ್ದುದು ಕೇಳಿ ಹೊರಟು ನಿಂತರು. ಅಷ್ಟರಲ್ಲಿ ಮನೆಯೊಡತಿ –ಪಂಡಿತರು ಬಂದು ಹಾಗೇ ಹೊರಡುವುದನ್ನು ತಿಳಿಸಿದರು. ತಕ್ಷಣ ಮಾಲಿಕರು ಹೊರ ಬಂದು ನುಡಿದರು. — ಸ್ವಾಮಿ, ದಯಮಾಡಿಸಬೇಕು. ಮೇಲೆ ಕೂಡಿರಿ. ಬಂದಿದ್ದೇಕೆ ? ಹಾಗೇ ಏಕೆ ಮರುಳಿದಿರಿ?" ಮಾಲವಿಯಾಜಿ ಮರುನುಡಿದರು—"ಅಯ್ಯಾ ಮಹಾನುಭವರೆ, ಐದು ನಯ ಪೈಸೆಗಾಗಿ ತಾವು ಮಗನನ್ನು ಬೈಯುವುದು ಕೇಳಿದೆ. ನನಗೇನು ವಿಶ್ವ ವಿದ್ಯಾಲಯದ ಕಟ್ಟಡಕ್ಕೆ ನಿಮ್ಮಿಂದ ಸಹಾಯ ದೊರೆತೀತೆಂದು ಹೊರಟಿದ್ದೆ ! ತಕ್ಷಣ ಒಡೆಯರು ಒಳಗೆ ಹೋಗಿ ಎರಡು ಸಾವಿರದ ಒಂದು ರೂಪಾಯಿಯ ಚೆಕ್ ತಂದು ಪಂಡಿತರೆದುರು ಇಟ್ಟು ಉಗ್ಗಡಿಸಿದರು— ಸ್ವಾಮಿ, ನಾನು ಕಾಸಿಗೆ ಕಾಸು ಚಿಕಿತ್ಸೆ ಮಾಡದಿದ್ದರೆ. ಮಗನನ್ನು ಸನ್ಮಾರ್ಗಕ್ಕೆ ಹಚ್ಚದಿದ್ದರೆ, ನನ್ನ ದೊಡ್ಡ ಆಸ್ತಿಯ ಗತಿ ಏನಾದೀತು ? ನಾನು ಹೊಟ್ಟೆ ನೆತ್ತಿ ಕಟ್ಟಿ ನಾಳಿನ ಸುಖಕ್ಕಾಗಿ ಕೂಡಿಟ್ಟಿರುವೆ. ಅದರಿಂದ ನನ್ನ ಮನೆತನ ಮುಂದಾಗಬೇಕೆಂದು ಅಪೇಕ್ಷೆ. ದೇಣಿಗೆಯ ವಿಷಯವೇ ಬೇರೆ. ಮಿತವ್ಯಯದಿಂದ ಕಟ್ಟು ನಿಟ್ಟು ನಿಯಮಗಳೇ ಬೇರೆ. ಒಂದಕ್ಕೊಂದು ತಳುಕು ಹಾಕುವಂತಿಲ್ಲ" ಉತ್ತರ ಕೇಳಿ ಮಾಲವಿಯಾಜಿ ಆ ಸಿರಿವಂತ ವಿವೇಕಿ ಗೃಹ



ಸ್ಥನ ಮೂರ್ತಿಗೆ ಹೌದೆಂದು ಒಪ್ಪಿದರು. ತಲೆದೂಗಿದರು ಆ ವಾದ ಸರಣಿಗೆ. ಇದ್ದರೆ ಇಂತಹ ತಿಳುವಳಿಕೆಯ ನಾಗರೀಕರಿರಬೇಕು. ಇಂತಹ ಮಹಾನುಭಾವರಿಗೆ ನಿರಂತರ ಆಶ್ರಯವಿತ್ತ ಕಾಶಿ ವಿಶ್ವನಾಥನಿಗೆ ಮನದಲ್ಲಿಯೇ ಅಭಿವಂದನೆ ಮುನ್ನಡೆದರಂತೆ! ಶ್ರೀಕಾಂತ ಎಲ್ಲ ಕೇಳಿ ಬೆಪ್ಪಾದ. ಈರ್ವರು ಮನೆಯೆಡೆಗೆ ಹೊರಟರು. ಹಿಂದಿ ಬಲ್ಲ ರವಿ ಶಂಕರ ಮುಂದೆ. ಅದರ ಅಜ್ಞ ಶ್ರೀಕಾಂತ ಅವನ ಹಿಂದೆ ಹೀಗೆ ನಡೆದಿತ್ತು ಅವರ ನಿಶ್ಯದ ವ್ಯವಹಾರ.

ಗೆಳೆಯನು ಹಿಂದಿ ಬಲ್ಲವನಾಗಲಿ, ಭಾರತದ ಆಡಳಿತ ಭಾಷೆಯದು ಎಂದು ವಿಚಾರಿಸಿ ರವಿಶಂಕರನು ಶ್ರೀಕಾಂತನನ್ನು ಬೇಕೆಂತಲೆ ಒಬ್ಬನನ್ನೇ ಹೊರಗೆ ಬಿಡುತ್ತಿದ್ದನು ತಾಸೆರಡು ತಾಸು ಅಲೆದಾಡಿಕೊಂಡು ಬಾ ಎಂದು. ಆಗ ಶ್ರೀಕಾಂತನು ತನ್ನ ಅಭ್ಯಾಸದ ನಂತರ ಉಪಹಾರ ಮಂದಿರಕ್ಕೆ ಹೋಗಿ ಗಂಗಾ ತೀರದಲ್ಲಿ ಬಂದು ಕುಳಿತುಕೊಳ್ಳುತ್ತಿದ್ದನು. ಆ ಪಾವಟಿಗೆಗಳನ್ನು ಕಂಡಾಗ ಅವನಿಗೆ ತಾನು ಓದಿದ ಜಗನ್ನಾಥ್ ಪಂಡಿತನ ಗಂಗಾಲಹರೀ" ಖಂಡ ಕಾವ್ಯದ ಝುಳುಕು ಹೊಡೆಯುತ್ತಿತ್ತು. ಆ ಅಲೌಕಿಕನಾದ ಮಾಧುರಿ ಕಿವಿಯಲ್ಲಿ ಗುಣುಗುಣಿಸುತ್ತಿತ್ತು—

"ಮರುಲ್ಲೀಲಾಲೋಲಲ್ಲಹರಿಲುಲಿತಾಂಭೋಜಪಟಲೀ ।
ಸ್ಖಲತ್ಪಾಂಸುವ್ರಾತಚ್ಛುರಣವಿಸರತ್ ಕೌಂಕುಮರುಚಿ ॥
ಸುರಸ್ತ್ರೀವಕ್ಷೋಜಕ್ಷರದಗರು ಜಂಬಾಲಜಟಿಲಂ ।
ಜಲಂತೆ ಜಂಬಾಲಂ ಮಮ ಜನನ ಜಾಲಂ ಜರಯತು ॥
ವಿಭೂತಾನಂಗರಿಪೂತ್ತಮಾಂಗಾ।
ಸದ್ಯಃ ಕೃತಾನೇಕ ಜನಾರ್ತಿ ಭಂಗಾ।।
ಮನೋಹರೋ ತುಂಗ ಚಲತ್ತರಂಗಾ।
ಗಂಗಾ ಮಮಾಂಗಾನ್ಯಮಲೀಕರೋತು॥

ಎಂಬ ಪಂಕ್ತಿಗಳನ್ನು ಅವ ಮರೆಯದಾದ. ಆ ವೀರೇಶ್ವರ ಘಾಟಿನ ಪಾವಟಿಗೆಗಳನ್ನು ಎಣಿಸುವ ಗೋಜಿಗೆ ಶ್ರೀಕಾಂತನು ಹೋಗಲಿಲ್ಲ, ಆದರೆ ಕವಿ ಪುಂಗವನು ಮಾತ್ರ ಪದ್ಯಗಳನ್ನು ಬರೆದುದು ಸ್ಮೃತಿಪಟಲದಲ್ಲಿ ಮಿಂಚಿ ಹೋಯಿತು. ಹಾಗೆ ಅವನು ನದೀ ತೀರದ ಮಳಲಿನ ಮೇಲೆ ಕೂಡ್ರುತಿದ್ದ ತಾಸುಗಟ್ಲೆ. ಎದುರಿನ ರೈಲು ಸೇತುವೆ ಉದ್ದನುದ್ದ ಆವರಿಸಿದುದು ಗೋಚರಿಸುತ್ತಿತ್ತು. ಝುಗ್ ಝುಗ್ ಝುಕು ಚುಕು ಸದ್ದು ಮಾಡುತ್ತ ಹೊರಚಿಟ್ಟ ರೈಲಿನ ನಿನಾದ ಕಿವಿಯನ್ನೇ ಭೇದಿಸುತ್ತಿತ್ತು. ಮತ್ತೆ ಶ್ರೀಕಾಂತನ ಮನಸ್ಸು ಆ ಗಂಗಾಮಾತೆಯ ದಿವ್ಯ ಸಾನ್ನಿಧ್ಯದಲ್ಲಿ ಸುಳಿಯುತ್ತಿತ್ತು. ಆಕೆಯ ಅಲೆಗಳ ಹೃದಯದ ಮೇಲೆ ನಾಕೆಗಳು ಮೃದುವಾದ ನರ್ತಿಸುತ್ತ ಕ್ಷಿತಿಜದಾಟಿ ಎಲ್ಲಿಯೋ ಕ್ರಮಿಸುತ್ತಿದ್ದವು. ಆ ನಾವಿಕರ ವಿಚಿತ್ರ ಮಧುರ ಹಾಡು

ಗಳು ಬಹು ಕಾಲ ಶ್ರೀಕಾಂತನನ್ನು ಯಕ್ಷಿಣಿ ಲೋಕಕ್ಕೆ ಒಯ್ಯುತ್ತಿದ್ದವು. ಅವುಗಳ ಅರ್ಥ ಅವನಿಗೆ ಹೊಳೆಯದು. ಆದರೆ ಆ ನಾದಧ್ವನಿಯ ಮೋಹಕತೆ ಮಾತ್ರ ಕಿವಿಯಲ್ಲಿ ನಿರಂತರ ನೆಲಸಿ ಕೀಟ್ಸ್ ಮಹಾ ಕವಿಯ

"A thing of beauty is a joy forever,
Its loveliness increascs
But will never pass into nothingness"

(ಸುಂದರ ವಸ್ತು ಆನಂದದ ಆಗರ. ಅದರ ಚೆಲುವು ಹೆಚ್ಚುತ್ತೆ ವಿನಹಾ ಶೂನ್ಯತೆಯಲ್ಲಿ ಅದು ಲೀನವಾಗದು) ಎಂಬ ಪಂಕ್ತಿಗಳನ್ನು ನೆನಪಿಗೆ ತರುತ್ತಿತ್ತು.

ಆದರೆ....ಆದರೆ.... ಇಷ್ಟೊಂದು ಸೌಂದರ್ಯವನ್ನು ಬಹುಕಾಲ ಒದಗಿಸಿದ್ದ ಸಹೃದಯ, ಮಹತ್ವಾಕಾಂಕ್ಷಿ ರವಿಶಂಕರನು ಮೊನ್ನೆ ಮೊನ್ನೆ ಇಲ್ಲದಾಗಿದ್ದ. ಅದು ಆಕಸ್ಮಿಕ, ಅಕಾಲಿಕ ಸಾವು! ಸುದ್ದಿಯನ್ನು ಕೇಳಿ ಶ್ರೀಕಾಂತನು ಎದೆಯೊಡೆದುಕೊಂಡನು. ಮತ್ತೆ ಮರುಕ್ಷಣ ಎಲ್ಲವೂ ದೈವದಾಟ, ವಿಧಿವಿಲಾಸ, ಬ್ರಹ್ಮಸಂಕಲ್ಪ ಎಂದು ಸಮಾಧಾನ ಹಚ್ಚಿಕೊಂಡ. ಮಾನವ ಜೀವನವೇ ನೀರಗುಳ್ಳೆಯಂತೆ ಕ್ಷಣಭಂಗುರ ಎಂದು ಷರಾ ಹಾಕಿ ತನ್ನ ನಿತ್ಯ ನೈಮಿತ್ತಿಕ ಕಾರ್ಯದಲ್ಲಿ ತಲ್ಲೀನನಾದನು. "ಎಲ್ಲವೂ ನನ್ನ ಮನಸಿನಂತೆ ಆಗದು. ಕಾಣದ ಕೈಯ ಕೈಚಳಕ ಒಂದಿದೆ. ಅದರ ಲೀಲೆ ರಹಸ್ಯಾತ್ಮಕವಾದುದು, ಮಾನವನ ಶಕ್ತಿಯು ಅಡಗಿದೆ" ಅಂದುಕೊಂಡನು. ನಾನು ಮಾಡುವೆನೆಂಬುದು ಹುಸಿ; ಎಲ್ಲ ಪರಮಾತ್ಮನ ಕೃಪೆ ಎಂದುಕೊಂಡನು. ಆದರೂ ನಿತ್ಯದ ವ್ಯವಹಾರದಲ್ಲಿ ವಿರಾಗಿಯಂತೆ ಕೈಚೆಲ್ಲಿ ಕೂಡ್ರಲು ಬರುವಂತಲ್ಲ. ಹೀಗೆ ಅವನು ವಿಚಾರಪರನಾದಂತೆ ಕಾಲಚಕ್ರ ಉರುಳಿತು. ಶ್ರೀಕಾಂತನ ದಿನಚರಿ ಬದಲಾಗುತ್ತ ನಡೆಯಿತು.

ರವಿಶಂಕರರ ಹೆಸರು ಇಷ್ಟಾದರೂ ನೀರ ಮೇಲಣ ಲಿಪಿ ಆಗಲಿಲ್ಲ. ಪಾರ್ಥಿವ ಶರೀರ ಅವನದು ಉಳಿಯದಿದ್ದರೂ ಅಸಂಖ್ಯಾತ ವಿದ್ಯಾರ್ಥಿ ವಿದ್ಯಾರ್ಥಿನಿಯರ ಹೃದಯ ಗಹ್ವರದಲ್ಲಿ ಅವನು ಉಳಿದನು. ಎಲ್ಲ ಶಿಕ್ಷಕರು, ವಿದ್ಯಾರ್ಥಿ ವಿದ್ಯಾರ್ಥಿನಿಯರ ವೃಂದ ಕೊಡುಗೈ ಬುದ್ಧಿಯಿಂದ ಹಣ ಕೊಟ್ಟಿತು. ಅವನ ಹೆಸರಿನಿಂದ ಬುದ್ಧಿಶಾಲಿ ಬಡವಿದ್ಯಾರ್ಥಿಗಳಿಗೆ ಸಹಾಯ ಸಲ್ಲಿಸುವದೆಂದು ನಿರ್ಣಯವಾಯಿತು. ಅಂದು ಶ್ರೀಕಾಂತನು ವೇದಿಕೆ ಏರಿ ಗೆಳೆಯನ ಬಗ್ಗೆ ಮಾತಾಡಲು ಹೋಗಿ ಗದ್ಗದಿತಕಂಠದವನಾಗಿ ಮರಳಿ ಬಂದು ಕುಳಿತನು.

---

ಎನ್ನಂತೆ ಪುಣ್ಯಗೈದವರುಂಟೆ? ಎನ್ನಂತೆ ಭಾಗ್ಯಗೆಯ್ದವರುಂಟೆ? ಕಿನ್ನರನಂತಪ್ಪ ಸಹೋದರರೆನಗೆ. ಏಳೇಳು ಜನ್ಮದಲಿ ಶಿವಭಕ್ತರೇ ಬಂಧುಗಳೆನಗೆ. ಚನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ. —ಅಕ್ಕಮಹಾದೇವಿ ವಚನ



## ಪುಣ್ಯಕ್ಷೇತ್ರಗಳು—೭
## ಕೂಡಲಸಂಗಮ—

—ಪಂಡಿತ ಕೆ. ಪಿ. ಶಿವಲಿಂಗಯ್ಯ
ಪ್ರಾಂಶುಪಾಲರು, ಸರಕಾರಿ ಬಾಲಕರ ಕಿರಿಯ ಕಾಲೇಜು, ಬೆಂಗಳೂರು.

ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿದೆ. ಹುನಗುಂದದಿಂದ ಹತ್ತು ಮೈಲಿಗಳ ದೂರ. ಕೃಷ್ಣಾ ಮತ್ತು ಮಲಪ್ರಭಾ ನದಿಗಳ ಸಂಗಮದಲ್ಲಿ ಇರುವ ಪುರಾತನ ಕ್ಷೇತ್ರವಿದು. ಇಲ್ಲಿರುವ ಸಂಗಮೇಶ್ವರ ದೇವಾಲಯವು ಚಾಲುಕ್ಯ ಶೈಲಿಯಲ್ಲಿ ನಿರ್ಮಿತವಾಗಿದೆ. ಇಲ್ಲಿ ಸ್ಥಾಪಿತವಾಗಿರುವ 'ಲಿಂಗ'ವು ಯುಗಯುಗಾಂತರದಿಂದಲೂ ಇದೆಯೆಂದು ಸ್ಥಳಪುರಾಣದಿಂದ ತಿಳಿದು ಬರುತ್ತದೆ.

ಬಸವಣ್ಣನವರು ತಮಗೆ ಹುಟ್ಟುವಾಗಲೇ ಕೂಡಲ ಸಂಗಮದೇವರೇ ಗುರು ಜಾತವೇದಮುನಿಗಳ ರೂಪದಲ್ಲಿ ಆಗಮಿಸಿದಷ್ಟು ಲಿಂಗಧಾರಣೆ ಮಾಡಿರುವುದರಿಂದ ಮತ್ತೆ ದ್ವಿಜದೀಕ್ಷೆ [ಉಪನಯನ] ಸಂಸ್ಕಾರ ಬೇಡವೆಂದು ಹೇಳಿ ತಾಯಿ ತಂದೆಗಳಿಂದ ಬೀಳ್ಕೊಂಡು ಅಕ್ಕ-ನಾಗಮ್ಮನೊಂದಿಗೆ ಇಲ್ಲಿಗೆ ಬರುತ್ತಾರೆ. ಆಗ ಆ ತಾಯಿಯು ಈ ದೇವಾಲಯದ ಸೊಬಗನ್ನು ತಮ್ಮನೊಂದಿಗೆ ವರ್ಣಿಸಿ ಹೇಳುತ್ತಾಳೆ. ಆಗಲೇ ಅಣ್ಣನವರಲ್ಲಿದ್ದ ಕವಿಚೇತನದಿಂದ ಈ ಮುಂದಣ ವಚನ ಹೊರಹೊಮ್ಮುತ್ತದೆ:

"ಉಳ್ಳವರು ಶಿವಾಲಯವ ಮಾಡುವರಯ್ಯ
ನಾನೇನ ಮಾಡಲಿ, ಬಡವನಯ್ಯ
ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ
ಕೂಡಲ ಸಂಗಮದೇವ ಕೇಳಯ್ಯ:
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"

"ದೇಹೋ ದೇವಾಲಯ ಪ್ರೋಕ್ತೋ ಜೀವೋದೇವಸ್ಸನಾತನಃ" ಎನ್ನುವ ಪ್ರಾಚೀನ ವಾಣಿಯನ್ನು ತಮ್ಮ ಕವಿವಾಣಿಯ ಮೂಲಕ ಇಷ್ಟೊಂದು ಸುಂದರವಾಗಿ ಚಿತ್ರಿಸಿದ್ದಾರೆ ಅಣ್ಣನವರು.

ಇಲ್ಲಿ ಆ ಕಾಲದಲ್ಲಿ ಪ್ರಸಿದ್ಧ ಗುರುಕುಲವಿದ್ದು, ಜಾತವೇದ ಮುನಿಗಳೇ ಅದರ ಕುಲಪತಿಗಳಾಗಿದ್ದರು. ಬಸವಣ್ಣನವರು ಸಂಸ್ಕಾರಯುತ ಜೀವನವನ್ನು ಮತ್ತಷ್ಟು

ಪ್ರೋಜ್ವಲವಾಗಿಸಿ ಶಿಷ್ಯರ ವಚನಾಂಕಿತದಲ್ಲಿ 'ಕೂಡಲ ಸಂಗಮದೇವ' ರಾಗಿ ಮೆರೆದಿದ್ದಾರೆ. ಇಲ್ಲಿಂದಲೇ ಗುರುವಾಜ್ಞೆಯಂತೆ ಕಲ್ಯಾಣಕ್ಕೆ ಹೋಗಿ ಲೋಕಕಲ್ಯಾಣ ಕಾರ್ಯವೆಸಗುತ್ತಾರೆ. ಮತ್ತೆ ಕಲ್ಯಾಣ ಕ್ರಾಂತಿಯಾಗುವ ಮುನ್ನ ಸಂಗಮಕ್ಕೆ ಹೋಗಿ ಐಕ್ಯರಾಗಿರುತ್ತಾರೆ. ಇಲ್ಲಿ ಪ್ರತಿ ವರ್ಷ ಜಾತ್ರೆ ನಡೆಯುತ್ತದೆ. ಇಲ್ಲಿಗೆ ಅನತಿದೂರದಲ್ಲಿ ನೀಲಗಂಗವ್ವನ ಗುಡಿಯಿದೆ. ನೀಲಾಂಬಿಕೆ ಹಾಗೂ ಅಪ್ಪಣ್ಣ ಶರಣರ ಸಮಾಧಿಗಳಿವೆ. 'ತಂಗಿ ಅಡಗಿದ ತಾಣ' ಆದ್ದರಿಂದ ತಂಗಡಗಿ ಎಂದಾಗಿದೆ. ವಿಜಯನಗರದ (ತಾಳಿಕೋಟೆ) ಯುದ್ಧ ನಡೆದ ರಕ್ಕಸ ತಂಗಡಗಿಯೇ ಇದು.

ಇದೀಗ ಕೃಷ್ಣಾ (ಆಲಮಟ್ಟಿ) ಜಲಾಶಯದಲ್ಲಿ ಇವೆಲ್ಲ ಜಲಾವೃತವಾಗಿ ಹೋಗುತ್ತಿವೆ ಘನ ಸರ್ಕಾರದವರು ಎಷ್ಟರ ಮಟ್ಟಿಗೆ ಈ ಕ್ಷೇತ್ರವನ್ನು ಉಳಿಸುವರೋ ಕಾದು ನೋಡಬೇಕಾಗಿದೆ.

---

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ ಭವಬಂಧನವ ಬಿಡಿಸಿ ಪರಮ ಸುಖವ ತೋರಿದ ಗುರುವೇ, ಭವಿ ಎಂಬುದ ತೊಡೆದು ಭಕ್ತೆ ಎಂದೆನಿಸಿದ ಗುರುವೇ, ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು.

—ಅಕ್ಕಮಹಾದೇವಿಯಕ್ಕನ ವಚನಗಳು





# ಬಸವರಸರ ಲೀಲೆಗಳು—3

—ಹೆಚ್. ಜಿ. ರಾಧಾದೇವಿ
ನಂ. 12-1-71/ಗಂಜ್‌ರಸ್ತೆ, ರಾಯಚೂರು-584101

ಜನ್ಮ ರಹಸ್ಯ:-

ಈ ಘಟನೆ ನಡೆದ ಮೇಲಂತು ಎಲ್ಲರ ಕಣ್ಣಲ್ಲು ಮಗುವಿನ ಬೆಲೆ ಏರುತ್ತದೆ. ಈ ಅಲೌಕಿಕ ಶಿಶುವಿನ ಬಗ್ಗೆ ಬಾಗೆವಾಡಿಯ ಸುತ್ತ ಮುತ್ತ ಪ್ರಚಾರವಾಗುತ್ತದೆ.

ಸುತ್ತಲ ಊರೂರಿಂದ ಸುವ್ವಲಾಲಿ
ಮತ್ತೆ ಶಿಶುವ ನೋಡ ಬಂದ್ರೊ ಸುವ್ವಲಾಲಿ
ಎತ್ತಿದ ಕೈ ಮುಗಿದು ಶಿಶುವಿನ್ನ ಸುವ್ವಲಾಲಿ
ಎತ್ತಿಕೊಂಡು ಲಾಲಿಸಿದರೊ ಸುವ್ವಲಾಲಿ

ಆದರೆ ತಂದೆ ತಾಯಿಯರು ಎಷ್ಟೇ ಕಣ್ಗಾವಲು ಕಾಪಿಟ್ಟರು ಮಗು ಆಗಾಗ ನಾಪತ್ತೆಯಾಗಿ ಶಿವಾಲಯದ ಗರ್ಭಗುಡಿಯ ಒಳ ಸಾರಿರುತ್ತದೆ. ಊರವರಿಗೆ ಇದೊಂದು ರಹಸ್ಯವೇ ಆಯಿತು. ತಾಯಿಗು ಚಿಂತೆ ಎನಿಸುತ್ತದೆ.

ಹೊನ್ನ ತೊಟ್ಟಿಲಲ್ಲಿ ಶಿಶುವ ಸುವ್ವಲಾಲಿ
ಚೆನ್ನಾಗಿ ಮಲಗಿಸಿದ್ದೆ ಸುವ್ವಲಾಲಿ
ಅಲ್ಲಿಂದ ಹಾರಿಬಂದು ಸುವ್ವಲಾಲಿ
ಇಲ್ಲಿ ಶಿಶುವು ಬಂದುದ್ದು ಸುವ್ವಲಾಲಿ ॥

ಎಂದು ಒಂದು ಬಾರಿ ಚಕಿತಳಾಗುತ್ತಾಳೆ, ಇನ್ನೊಮ್ಮೆ ಎಣ್ಣೆಯನ್ನು ಒತ್ತಿದ ಶಿಶು, ನೀರೆರೆಯುವಷ್ಟರಲ್ಲಿ ಮಾಯವಾಗಿರುತ್ತದೆ,

ಹಸಿದ ಶಿಶುವಿಗೆ ನಾನು ಸುವ್ವಲಾಲಿ
ಹಾಲು ಕುಡಿಸಿ ಒಳಗೆ ಬಂದು ಸುವ್ವಲಾಲಿ
ಬಿಸಿಯು ತೈಲ ಒತ್ತಿ ಶಿರಕ್ಕೆ ಸುವ್ವಲಾಲಿ
ಮೀಯಿಸಲು ಹೋದ್ರೆ ಮಾಯ ಸುವ್ವಲಾಲಿ

ಆ ಮಗುವಾದರು ಎಲ್ಲಿರುತ್ತದೆ.... ? ಇದು ಎಲ್ಲರಿಗು ಗೊತ್ತಿದ್ದ ರಹಸ್ಯವಾಯಿತು, ಮಗು ದೇವಾಲಯದಲ್ಲಿ ಬಾಗಿಲು ತೆರೆದು ಗರ್ಭಗುಡಿ ಒಳ ಹೊಕ್ಕರೆ.

ಲಿಂಗದೆದುರು ಮಲಗಿರುತ್ತದೆ, ಮಗುವನ್ನು ಮನೆಯಲ್ಲೆ ಉಳಿಸಿಕೊಳ್ಳಲು ತಾಯಿ ಶಿವಭಕ್ತರ ಕಥೆಗಳನ್ನು ಹೇಳುತ್ತ ರಮಿಸುತ್ತಾಳೆ,

ಗೋಲಿ ಚೆಂಡು ಬುಗುರಿಯೊಲ್ಲ ಸುವ್ವಲಾಲಿ
ಆಲಿಸುವ ಶಿವನ ಕಥೆಯ ಸುವ್ವಲಾಲಿ
ಸಿರಿಯಾಳ ಶಿಶುವ ಕೊಟ್ಟ... ಸುವ್ವಲಾಲಿ
ಹಿರಿದಾದ ಕಥೆಗೆ ನಲಿವ ಸುವ್ವಲಾಲಿ

ಸಿರಿಯಾಳನ ಕಥೆ ಶಿಶುವಿಗೆ ಅಪರಿಮಿತ ಇಷ್ಟವಾಗುತ್ತದೆ,

ಶಿವನಿಗೆ ಶಿಶುವ ಕೊಟ್ಟಭಕ್ತ ಸುವ್ವಲಾಲಿ
ಸಿರಿಯಾಳ ಶಿವನ ಪರಮಭಕ್ತ ಸುವ್ವಲಾಲಿ
ಹಿರಿದಾದ ಹಿಗ್ಗಿನುಡಿದ ಬಸವ ಸುವ್ವಲಾಲಿ
ಬೆರಗಾದಳು ತಾಯಿ ಮಾದಲಾಂಬೆ ಸುವ್ವಲಾಲಿ

ಸಿರಿಯಾಳನಂತ ಶ್ರೇಷ್ಠ ಶಿವಭಕ್ತ ಇನ್ನಿಲ್ಲವೆಂದು ಮಗು ಬಸವ ತೊದಲ್ನುಡಿಯಲ್ಲಿ ನುಡಿದಾಗ ತಾಯಿ ಮಾದಲಾಂಬೆ ಬೆರಗಾಗುತ್ತಾಳೆ

ಸಿಂಧು ಬಲ್ಲಾಳನೃಪನು ಸುವ್ವಲಾಲಿ
ಹೆಂಡತಿಯ ಶಿವಗರ್ಪಿಸಿದ ಸುವ್ವಲಾಲಿ
ಚಂದದ ಕಥೆ ಕೇಳಿ ಬಸವ ಸುವ್ವಲಾಲಿ
ಇವನಿಂದಧಿಕ ಭಕ್ತರಿಲ್ಲೆಂದ ಸುವ್ವಲಾಲಿ

ಸಿಂಧುಬಲ್ಲಾಳನೃಪ ಬೇಡಲು ಬಂದ ಶಿವನಿಗೆ ತನ್ನ ಮಡದಿಯನ್ನೆ ಅರ್ಪಿಸಿದ ಕಥೆ ಕೇಳಿ ಶಿಶುವು ಇವನಿಗಿಂತ ಹೆಚ್ಚಿನ ಭಕ್ತರು ಯಾರೆಂದು ಪ್ರಶ್ನೆ ಹಾಕುತ್ತದೆ, ಚಿಕ್ಕ ಮಗು ಬಸವ ಎಲ್ಲ ಮಕ್ಕಳಂತೆ ಮಣ್ಣು ಧೂಳು ಮೈಮೇಲೆ ಎರಚಿ ಕೊಂಡು ಗೋಲಿ, ಚೆಂಡು, ಬುಗುರಿ ಆಡಲಿಲ್ಲ, ಅವನು ಕೇಳಿದ್ದು ಭಸ್ಮ ರುದ್ರಾಕ್ಷಿ ಮಾತ್ರ

ಭಸ್ಮ ಬೇಕು ಎಂದು ಬಸವ ಸುವ್ವಲಾಲಿ
ಅತ್ತತ್ತ ಕಾಡುತ್ತಾನೆ ಸುವ್ವಲಾಲಿ
ರುದ್ರಾಕ್ಷಿ ಬೇಕೆಂದು ಬಸವ ಸುವ್ವಲಾಲಿ
ಬಿದ್ದುಬಿದ್ದು ಅಳುತ್ತಾನೆ ಸುವ್ವಲಾಲಿ

ತಾಯಿಗೆ ಆಗಾಗ ಈ ಮಗುವಿನ ಬಗ್ಗೆ ಚಿಂತೆಯಾಗುತ್ತದೆ, ಎಲ್ಲರಂಥ ಶಿಶುವಲ್ಲ ತನ್ನ ಮಗ' ಇವನ ಹಾದಿಯೇ ಬೇರೆ, ಲೋಕದ ಪರಿಗೆ ಬಹು ವಿರುದ್ಧ...



ಬಹು ವಿಚಿತ್ರ,

ಮುತ್ತಿನ್ಹಾರ ಹಾಕಿದರೆ ಸುವ್ವಲಾಲಿ
ಕಿತ್ತು ರುದ್ರಾಕ್ಷಿ ಧರಿಸ್ಯಾನ ಸುವ್ವಲಾಲಿ
ಕಸ್ತೂರಿ ತಿಲುಕ ಇಟ್ರೆ ಸುವ್ವಲಾಲಿ
ಮತ್ತೆ ಒರಸಿ ಭಸ್ಮ ಹಚ್ಚಿದ ಸುವ್ವಲಾಲಿ

ತಾಯಿ ಮಾಡುವ ಅಲಂಕಾರವೇ ಬೇರೆ, ಈ ಮಗು ತಾನು ಮಾಡಿಕೊಳ್ಳುವ ಅಲಂಕಾರವೇ ಬೇರೆ, ಮಗುವಿನ ಐದನೆ ವರ್ಷದ ಹುಟ್ಟಿದ ಹಬ್ಬ ಬರುತ್ತದೆ, ತಾಯಿ ಈ ಮಗುವಿನ ಅಲೌಕಿಕ ವರ್ತನೆಗೆ ಬೇಸತ್ತು ಈ ರೀತಿ ಕೇಳುತ್ತಾಳೆ,

ಒಮ್ಮೆ ಮಾದಮ್ಮ ತಾಯಿ ತಾನು ಸುವ್ವಲಾಲಿ
ತನ್ನ ಮಗನ ಕೇಳಿದಳು ಸುವ್ವಲಾಲಿ
ಲೋಕದಂಥ ಶಿಶುವು ಅಲ್ಲ ಸುವ್ವಲಾಲಿ
ನಿನ್ನ ರಹಸ್ಯ ಪೇಳೆಂದಳು ಸುವ್ವಲಾಲಿ

ತಾಯಿ ಮಾತಿಗೆ ಮಗು ಬಸವಣ್ಣ ಕಿಲಕಿಲನೆ ನಗುತ್ತಾನೆ,

ಎನ್ನ ಜನ್ಮದಿನಗಳಲ್ಲಿ ಸುವ್ವಲಾಲಿ
ಚೆನ್ನಾದ ಜನ್ಮರಹಸ್ಯ ಪೇಳುವೆ ಸುವ್ವಲಾಲಿ
ಏಳುತೊಡಿಗೆ ಹಾಕಿದರೆ ಸುವ್ವಲಾಲಿ
ಏಳು ಜನ್ಮ ರಹಸ್ಯ ಒರಡವೆ ಸುವ್ವಲಾಲಿ

ಮಗುವಿನ ಐದನೆ ವರ್ಷದ ಹುಟ್ಟಿದ ಹಬ್ಬ ಬರುತ್ತದೆ, ಆ ದಿನ ಮಾದಲಾಂಬಿಕೆಗೆ ಸಂಭ್ರಮವೋ ಸಂಭ್ರಮ,

ಎಣ್ಣೇ ನೀರು ಮಿಾಯಿಸಿ ಸುವ್ವಲಾಲಿ
ಬಣ್ಣಾ ಬಂಗಾರವಿಟ್ಟು ಸುವ್ವಲಾಲಿ
ಕಣ್ಣಿಗೆ ಕಪ್ಪಿಟ್ಟು ಸುವ್ವಲಾಲಿ
ಹೊನ್ನ ಕಡಗ ಹಾಕಿದರೆ ಸುವ್ವಲಾಲಿ

ಮಗುವಿಗೆ ಒಂದರ ಮೇಲೊಂದರಂತೆ ಏಳು ತೊಡಿಗೆ ಹಾಕುತ್ತಾರೆ, ನೀಲರತ್ನದ ತೊಡಿಗೆ, ಹವಳದ ತೊಡಿಗೆ ಪಚ್ಚೇ ತೊಡಗೆ, ಮುತ್ತಿನ ತೊಡಗೆ ಹೀಗೆ ಏಳು ಬಗೆಯ ತೊಡಿಗೆ ಹಾಕಿದ್ದಾರೆ,

ಮಣಿದು ಶಿವನಿಗೆ ಬಸವ ಸುವ್ವಲಾಲಿ
ಕುಣಿದು ಕುಪ್ಪಳಿಸಿದ ತಾನು ಸುವ್ವಲಾಲಿ
ಹೆಣೆದ ತೊಡಿಗೆ ಕಳಚುತಿರಲು ಸುವ್ವಲಾಲಿ
ನೆನೆದ ಒಂದೊಂದೆ ಜನ್ಮ ಸುವ್ವಲಾಲಿ

ಕುಣಿದು ಕುಣಿದು ತನ್ನ ಜನ್ಮ ರಹಸ್ಯ ಹೇಳುತ್ತಿದ್ದಂತೆ ತೊಟ್ಟಿದ್ದ ತೊಡಿಗೆ ಕಳಚಿ ಮನೆಯಲ್ಲೆ ಮುತ್ತು ರತ್ನಗಳು ಸುರಿಯುತ್ತದೆ ಶಿಶುವು ತನ್ನ ನಿಜವನ್ನು ತಾನು ಅರಹುತ್ತದೆ,

ಶಿವನ ಪರಮ ಭಕ್ತನಾಗಿ ಸುವ್ವಲಾಲಿ
ಹರನ ಸಂಗದಲ್ಲಿದ್ದೆ ಆದಿಯಿಂದ ಸುವ್ವಲಾಲಿ
ಕೃತಯುಗದಲ್ಲಿ ಶಿವನ ಎದುರು ಸುವ್ವಲಾಲಿ
ಸ್ಕಂದ ಗಣೇಶ್ವರ ನೆನಿಸಿದ್ದೆ ಸುವ್ವಲಾಲಿ

ಈ ರೀತಿ ಮಗು ಹೇಳುತ್ತಲೇ ಮೈಮೇಲಿನ ಮುತ್ತಿನ ತೊಡಿಗೆ ಬಿರಿದು ಮನೆಯೆಲ್ಲ ಮುತ್ತುದುರುತ್ತದೆ,

ತ್ರೇತೆಯಲ್ಲಿ ಶಿವನ ಎದುರು ಸುವ್ವಲಾಲಿ
ನೀಲ ಲೋಹಿತನೆಂದು ನಾನು ಸುವ್ವಲಾಲಿ
ಶಿವಧರ್ಮ ಪಥದಿ ನಡೆದು ಸುವ್ವಲಾಲಿ
ಶಿವನ ಗಣಕೆ ಒಡೆಯನಾದೆ ಸುವ್ವಲಾಲಿ

ಮಗುವಿಗೆ ಮೈಮೇಲಿನ ನೀಲ ತೊಡಿಗೆ ಬಿರಿದು ಮನೆಯೆಲ್ಲ ನೀಲರತ್ನ ಸಿಡಿಯುತ್ತದೆ,

ವೃಷಭನೆಂಬ ಹೆಸರಿನಲ್ಲಿ ಸುವ್ವಲಾಲಿ
ದ್ವಾಪರೆಯ ಮಧ್ಯದಲ್ಲಿ ಸುವ್ವಲಾಲಿ
ಶಿವನ ಗಣಕೆ ಒಡೆಯನಾಗಿ ಸುವ್ವಲಾಲಿ
ಶಿವನ ಸನಿಹದಲಿ ಇದ್ದೆ ಸುವ್ವಲಾಲಿ

ಆಗ ಮಗುವಿನ ಮೈಮೇಲೆ ಇದ್ದ ಪಚ್ಚೆಯ ತೊಡಿಗೆ ಸಿಡಿದು ಮನೆಯೆಲ್ಲಾ ಪಚ್ಚ ರತ್ನ ಹರಡುತ್ತದೆ,

ಊರಿನ ಹಿರಿಯರು, ಮಾದರಸನ ಆಪ್ತರು, ಬಂಧು ಬಾಂಧವರು ಈ ವಿಚಿತ್ರ ನೋಡಿ ಬೆರಗಾಗುತ್ತಾರೆ,

ಗಂಗಾಧರನ ಅಣತಿ ಹೊತ್ತು ಸುವ್ವಲಾಲಿ
ಬಂದೆ ಈ ಭುವಿಯಲ್ಲಿ ನಾನು ಸುವ್ವಲಾಲಿ
ಇಂದು ಎನ್ನ ಹೆಸರು ಸುವ್ವಲಾಲಿ
ಕಂದ ಬಸವನೆಂದಾರೊ....ಸುವ್ವಲಾಲಿ



ಮಗು ತನ್ನ ಜನ್ಮ ರಹಸ್ಯ ಹೇಳುತ್ತಿದ್ದಂತೆಯೆ ಒಂದೊಂದು ಉಡುಗೆ, ತೊಡಗೆ ಸಿಡಿದು ಮನೆಯೆಲ್ಲ ಮುತ್ತು ರತ್ನಗಳು ಉದುರುತ್ತವೆ, ಎಲ್ಲರೂ ಈ ಪವಾಡಕ್ಕೆ ಬೆರಗಾಗುತ್ತಾರೆ,

ಪಾರ್ವತಿಯ ರಮಣದಾಜ್ಞೆ ಸುವ್ವಲಾಲಿ
ಊರ್ವಿಯಲ್ಲಿ ಜನಿಸಿದೆ ಸುವ್ವಲಾಲಿ
ಭೂರಿದಂಡನೆಂಬ ಹೆಸರು ಸುವ್ವಲಾಲಿ
ಬಾರಿಯಾಯ್ತು ಬಸವದೆಂದು ಸುವ್ವಲಾಲಿ

ಈ ಮಗು ಕೈಲಾಸದಿಂದಿಳಿದ ಶಿವನ ಪ್ರತ್ಯಕ್ಷ ನಂದಿಯೆಂದು ಊರ ಜನ ಭಾವಿಸುತ್ತಾರೆ, ಅದರಂತೆಯೆ ಮಗುವಿನ ವರ್ತನೆಯು ಹಾಗೆ ಇದೆ,

ಶಿವನ ಲಿಂಗ ಹೊತ್ತು ಭುಜದಿ ಸುವ್ವಲಾಲಿ
ಭೂ....ಭೂ.... ಎಂದೋಡುತಾನೆ ಸುವ್ವಲಾಲಿ
ಶಿವನ ಲಿಂಗ ಹೊತ್ತು ಸಿರದಿ ಸುವ್ವಲಾಲಿ
ಹೋ....ಹೋ....ಎಂದೋಡುತಾನೆ ಸುವ್ವಲಾಲಿ

ಮಗುವಿನ ಆಟವೆಂಬರೆ ಇದು, ದೇವರ ಬಳಿ ಇದ್ದ ಶಿವಲಿಂಗ ಕರಡಿಗೆ ಹೊತ್ತು ಭುಜದ ಮೇಲೇರಿಸಿ ಭೂ...ಭೂ....ಎಂದೋಡುತ್ತಾನೆ, ಶಿವನನ್ನು ಹೊತ್ತು ಶಿರದಲ್ಲಿ ಹೋ....ಹೋ ಎಂದು ಕುಣಿಯುತ್ತ ಮನೆಯೆಲ್ಲ ಸುತ್ತಿ ಆಟವಾಡುತ್ತಾನೆ, ಮುಟ್ಟಬಾರದೆಂದು ಬುದ್ಧಿ ಹೇಳಿದ ತಾಯಿಗೆ ನಗುತ್ತಾ—

ಬೆನ್ನ ಮೇಲೆ ಶಿವನ ಹೊತ್ತು ಸುವ್ವಲಾಲಿ
ಚೆನ್ನಾಗಿ ತಿರುಗಾಡಿಸಿದ್ದೆ ಸುವ್ವಲಾಲಿ
ಮುನ್ನ ಕೈಲಾಸದಲ್ಲಿ ನಾನು ಸುವ್ವಲಾಲಿ
ಪನ್ನಗಾಧರನ ವಾಹನವಾಗಿದ್ದೆ ಸುವ್ವಲಾಲಿ

ದೇವರ ಲಿಂಗ ಕರಡಿಗೆ ಮುಟ್ಟಿದರೇನು ? ಹಿಂದೆ ನಾನು ಕೈಲಾಸದಲ್ಲಿದ್ದಾಗ ಶಿವನೆ ನನ್ನ ಬೆನ್ನ ಮೇಲೆ ಕುಳಿತಿದ್ದ ಎಂದು ತನ್ನ ಬೆನ್ನ ಮೇಲೆ ತ್ರಿಶೂಲದ ಗುರುತನು ತೋರಿಸಿ ತಾಯಿಯನ್ನು ಬೆರಗು ಗೊಳಿಸುತ್ತಾನೆ

---

## ಗುರುವಿನ ಮಹತ್ವ

ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ, ಭವಬಂಧನವ ಬಿಡಿಸಿ ಪರಮ ಸುಖವ ತೋರಿದ ಗುರುವೇ, ಭವಿ ಎಂಬುದ ತೊಡೆದು ಭಕ್ತ ಎಂದೆನಿಸಿವೆ ಗುರುವೇ; ಚನ್ನಮಲ್ಲಿಕಾರ್ಜುನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು.

—ಅಕ್ಕಮಹಾದೇವಿ

# ವಚನಕಾರ ಸೊಡ್ಡಳಬಾಚರಸ

—ಪ್ರೊ ಎಸ್. ಎಸ್. ಭೂಸರೆಡ್ಡಿ M.A, B.Ed
ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-3

ಬಸವಾದಿ ಪ್ರಮಥ ಪುಂಗವರ ಸಮಕಾಲೀನ ಶ್ರೇಷ್ಠ ವಚನಕಾರರ ಸಾಲಿನಲ್ಲಿ ಸೇರಬೇಕಾದ ಇನ್ನೊಬ್ಬ ವಚನಕಾರ ಸೊಡ್ಡಳಬಾಚರಸ. ಈ ನಾಡಿನ ದುರ್ದೈವ, ಇಂದಿಗೂ ಅವನು ಅಜ್ಞಾತವಾಗಿಯೇ ಉಳಿದಿದ್ದಾನೆ. ಎಪ್ಪತ್ತಕ್ಕೂ ಮಿಕ್ಕಿ ವಚನ ಗಳನ್ನು ಕನ್ನಡ ನುಡಿಗೆ ನೀಡಿದ ಈ ಮಹಾನುಭಾವನ ಸ್ಮರಣೆ ಮಾಡಿಕೊಳ್ಳುವುದು ಕೃತಜ್ಞ ಜನಾಂಗದ ಆದ್ಯಕರ್ತವ್ಯವಾಗಿದೆ. ಈ ವಚನಗಳನ್ನು ಅವಲೋಕಿಸಿದರೆ ಇವು ವೀರಶೈವ ಸಿದ್ಧಾಂತ ನಿರೂಪಣೆಗೆ, ಪ್ರತಿಪಾದನೆಗೆ ವಿಶೇಷ ಪ್ರಯೋಜನಕಾರಿ ಯಾಗಿವೆಯೆಂದು ಹೇಳಬಹುದು. ಜಾತೀಯತೆಯ ಬಗೆಗೆ, ಶಿವಸರ್ವೋತ್ತಮತೆಯ ಬಗೆಗೆ, ಪರಸ್ತ್ರೀ ವ್ಯಾಮೋಹದ ಬಗೆಗೆ ಹೀಗೆ ಹಲವು ಹನ್ನೊಂದು ವಿಷಯಗಳನ್ನು ಕುರಿತು ಖಚಿತವಾದ ನಿರ್ದುಷ್ಟವಾದ ಅಭಿಪ್ರಾಯಗಳನ್ನು ವ್ಯಕ್ತಮಾಡಿರುವುದು ಗೋಚರವಾಗುತ್ತದೆ ಇವನು ಬಿಜ್ಜಳನ ರಾಜ್ಯದಲ್ಲಿ ಉಗ್ರಾಣದ ಅಧಿಕಾರಿಯಾಗಿ ದ್ದನು. ಬಸವಣ್ಣನವರಿಗೆ ಅತ್ಯಂತ ನಿಕಟವರ್ತಿಯಾಗಿದ್ದನು. ವೀರಶೈವ ಕಾವ್ಯ ಗಳಾದ ಬಸವಪುರಾಣ, ವೀರಶೈವ ಕಾವ್ಯಗಳಾದ ಬಸವಪುರಾಣ, ವೀರಶೈವಾಮೃತ ಮಹಾಪುರಾಣ, ಶಿವತತ್ವ ಚಿಂತಾಮಣಿ, ಚೆನ್ನಬಸವ ಪುರಾಣ, ರಾಘವಾಂಕ ಚರಿತೆ, ಭೈರವೇಶ್ವರ ಕಥಾಮಣಿಸೂತ್ರ ರತ್ನಾಕರ, ಮಹಾಲಿಂಗಲೀಲೆ ಮೊದಲಾದು ವುಗಳಲ್ಲಿ ಅನೇಕ ವಿಷಯಗಳು ಇವನ ಜೀವನಚರಿತೆಯ ಮೇಲೆ ಬೆಳಕು ಬೀರುತ್ತವೆ. ಅದೇನೇ ಇದ್ದರೂ ಬಾಚರಸನ ವಚನಗಳು ಅಭ್ಯಸನೀಯವಾಗಿವೆ. ಅರ್ಥಪೂರ್ಣ ವಾಗಿವೆ ಬೋಧಪ್ರದವಾಗಿವೆ. ಈ ದಿಸೆಯಲ್ಲಿ ಕೆಲವು ವಚನಗಳ ಮೂಲಕ ಸ್ಪಷ್ಟಪಡಿಸಬಹುದು

ಇಂದೂ ಜಾತೀಯತೆಯ ವಿಷಜ್ವಾಲೆ ಹೊತ್ತಿಕೊಂಡು ಉರಿಯುತ್ತಿದೆ. ವೀರಶೈವರಲ್ಲಿ ಒಳಪಂಗಡಗಳ ಕಾಟವೂ ಹೆಚ್ಚಾಗುತ್ತಿದೆ. ತಮ್ಮ ತಮ್ಮ ಒಳಪಂಗಡ ಗಳ ಬಗೆಗೆ ಇನ್ನಿಲ್ಲದ ಅತಿರೇಕತೆ ಉಂಟಾಗಿದೆ. ಈ ದಿಸೆಯಲ್ಲಿ ಬಾಚರಸನ ಈ ವಚನ ಮಾರ್ಗದರ್ಶಿಯಾಗಿದೆ.

ಶಿಖಿಬ್ರಾಹ್ಮಣ, ನಯನಕ್ಷತ್ರಿಯ ;
ನಾಶಿಕ ಬಣಜಿಗ, ಅಧರ ಒಕ್ಕಲಿಗ ;



ಕರ್ಣ ಗೊಲ್ಲ, ಕೊರಳು ಕುಂಬಾರ;
ಬಾಹು ಪಂಚಾಳ, ಅಂಗೈ ಉಪ್ಪಾರ;
ನಖ ನಾಯಿಂದ, ಒಡಲು ಡಂಬ;
ಬೆನ್ನು ಅಗಸ, ಚರ್ಮ ಬೇಡ;
ಪೃಷ್ಠಸ್ಥಾನ ಕಬ್ಬಿಲ, ಒಳದೊಡೆ ಹೊಲೆಯ;
ಮಣಿಕಾಲು ಈಳಿಗ, ಕಣಕಾಲು ಸಮಗಾರ;
ಮೇಗಾಲು ಮಜ್ಜಿಗ, ಚಲಪದವೆಂಬ ಅಂಗಾಲು
ಶುದ್ಧ ಮಾದಿಗ ಕಾಣಿರೋ!
ಇಂತೀ ಹದಿನೆಂಟು ಜಾತಿ ತನ್ನಲ್ಲಿ ಉಂಟು
ಇವು ಇಲ್ಲಾಯೆಂದು ಜಾತಿಗೆ ಹೋರುವ
ಅಜ್ಞಾನಿಗಳ ನಮ್ಮ ಸೊಡ್ಡಳದೇವರು ಮೆಚ್ಚನಯ್ಯಾ

ಕುಲಕುಲವೆಂದು ಕೂಗುವ ಜಾತಿಡಂಭರನ್ನು ಕುರಿತು ಅದೆಷ್ಟು ಮನೋಜ್ಞವಾಗಿ ಮೇಲಣ ವಚನದಲ್ಲಿ ಪ್ರತಿಪಾದಿಸಿದ್ದಾನೆ ಬಾಚರಸ. ಶರಣರು ಗುಣಕ್ಕೆ ಶೀಲಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದರು. "ಲಿಂಗ ಧರಿಸದವರೆಲ್ಲ ಒಂದೇ ಎಂದೆ" ಎಂದು ಸಮಾನತೆಯ ಮಂತ್ರ ಘೋಷಿಸಿದರು. ಅವರದು ಗುಣರಾಜ್ಯವಾಗಿತ್ತು. ಇಂದೂ ಜಾತ್ಯಾತೀತ ಗಣರಾಷ್ಟ್ರ ನಿರ್ಮಾಣವಾಗಿದೆಯೇನೋ ನಿಜ. ಆದರೆ ಜಾತೀಯತೆ ಹೆಚ್ಚಾಗಿದೆ. ಗಣರಾಜ್ಯವಾಗಿದೆ. ನಿಜ. ಗುಣರಾಜ್ಯವಾಗಿಲ್ಲ. ಸುಖಿ ಸಮಾಜ ವಾಗಿಲ್ಲ, ರಾಷ್ಟ್ರೀಯ ವಿಚಾರಧಾರೆಗಳು ಶರಣರ ವಚನಗಳಲ್ಲಿ ಹಾಸುಹೊಕ್ಕಾಗಿವೆ. ಹನ್ನೆರಡನೆಯ ಶತಮಾನದಲ್ಲಿಯೇ ಇಂದು ನಾವು ಅಳವಡಿಸಿಕೊಳ್ಳಬೇಕಾದ ಅನೇಕ ವಿಚಾರಗಳನ್ನು ಅಂದೆಯೇ ಸುಸ್ಪಷ್ಟವಾಗಿ ನಿವೇದಿಸಿಕೊಂಡಿರುವುದು ಐತಿಹಾಸಿಕ ಸತ್ಯ.

ಶಿವನಿಗಿಂತಲೂ ಶಿವಶರಣರೇ ಶ್ರೇಷ್ಠರೆಂಬ ಮಾತನ್ನು ದೃಷ್ಟಾಂತಗಳ ಸರ ಮಾಲೆಗಳಿಂದ ಸ್ಪಷ್ಟಪಡಿಸಿರುವುದನ್ನು ಈ ವಚನದಲ್ಲಿ ಕಾಣಬಹುದು.

ಸಾಗರ ಘನವೆಂದಡೆ,
ಧರೆಯೊಳಡಗಿತ್ತು,
ಧರೆ ಘನವೆಂದಡೆ
ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು
ನಾಗೇಂದ್ರ ಘನವೆಂದಡೆ
ದೇವಿಯರ ಕಿರುಬೆರಳಿನ ಮುದ್ರಿಕೆಯಾಯಿತ್ತು
ಅಂತ ದೇವಿ ಘನವೆಂದಡೆ

ಶಿವನ ಅರ್ಧಾಂಗಿಯಾದಳು.
ದೇವ ಘನವೆಂದಡೆ ಬಾಣನ ಬಾಗಿಲ ಕಾಯ್ದ.
ನಂಬಿಯ ಹಡಪದ ಹಿಡಿದ
ಇದು ಕಾರಣ ಸೊಡ್ಡಳ
ನಿಮ್ಮ ಭಕ್ತರೇ ಘನ.

ಶರಣರು ಸರ್ವತಂತ್ರಸ್ವತಂತ್ರರು. ಯಾರ ಹಂಗಿಗೂ ಒಳಗಾಗದವರಲ್ಲ. ಅಂತೆಯೇ ಮೇದಾರ ಕೇತಯ್ಯ ಮೊದಲಾದ ಶರಣರ ಹತ್ತಿರವೇ ಶಿವನು ಪ್ರತ್ಯಕ್ಷನಾದ ಕಥೆಗಳಿವೆ ಶಿವನಿಗಿಂತಲೂ ಶರಣರೇ ಭಕ್ತರೇ ಶ್ರೇಷ್ಠರೆಂಬ ಮಾತು ನಿತ್ಯಸತ್ಯ. ಇವನ ವಚನಗಳು ಮಾನವೀಯ ಚಿರಂತನ ಮೌಲ್ಯಗಳ ಮಡುವಾಗಿವೆ. ನೀತಿಯುಕ್ತ ಸದಾಚಾರ ಭಾವಸೌರಭ ಸೂಸುವ ವಚನಗಳು ಇಂದಿನ ಹದಗೆಟ್ಟ ವಿಷಮ ಸಮಾಜಕ್ಕೆ ಕನ್ನಡಿ ಹಿಡಿದಿವೆಯೆಂದು ಹೇಳಬಹುದು

"ಗಂಡನುಳ್ಳ ಹೆಂಡಿರನು ಕಂಡು ಅಳುಪದಿರಾ ಮನವೆ
ಬಂದ ಬಸುರನು, ಉಂಡ ಮೊರೆಯನು ಕಂಡು ಮರುಗದಿರಾ ಮನವೆ,
ಉದ್ದಂಡತನದಲ್ಲಿ ನಡೆವ ಬಂಧಾರ
ಹುಳುಗೊಂಡದಲ್ಲಿಕ್ಕುವ ಸೊಡ್ಡಳದೇವ"

ಇಂದು ಮಹಿಳೆಯರ ಮಾನಭಂಗ ಹಾಡುಹಗಲೇ ನಡೆದಿದೆ. ದಿನ ಬೆಳಗಾದರೆ ಈ ಬಗೆಗೆ ಸಮಾಚಾರ ಪತ್ರಿಕೆಯಲ್ಲಿ ವರದಿಗಳು ಪ್ರಕಟವಾಗುತ್ತಿರುವುದೇ ಈ ಮಾತಿಗೆ ಸಾಕ್ಷಿ ಶರಣರು ಈ ಮೊದಲೇ ಎಚ್ಚರಿಕೆಯ ಘಂಟೆಯನ್ನು ಭಾರಿಸಿದ್ದಾರೆ. ನಾವು ಇಂದು ಕಿವಿಯಿದ್ದು ಕಿವುಡರಾಗಿದ್ದೇವೆ. ಕಣ್ಣಿದ್ದು ಕುರುಡರಾಗಿದ್ದೇವೆ ಉಂಡ ಮನೆಗಳ ಎಣಿಸುವ ಭಂಡರಾಗಿದ್ದೇವೆ. ಅದುದರಿಂದಲೇ ಸಮಾಜದಲ್ಲಿ ಅನೇಕ ದುರಂತಗಳು ನಡೆದಿವೆ. ಆದುದರಿಂದ ಬಾಚರಸ ಧರ್ಮತತ್ವಗಳ ಕಡೆಗೆ ಎಲ್ಲರ ಗಮನವನ್ನು ಹೀಗೆ ಸೆಳೆದಿದ್ದಾನೆ:

"ಜನಿಸಿದ್ದಾನೆ, ಜನನ ಪಟ್ಟಣವಿದೆ,
ಮಾಮರ ಹೂಮರನಿದೆ, ತೋಮರನಿದೆ ನೋಡಯ್ಯ!
ಅವ ಕಾರ್ಯವಾದಡೂ, ದೇವಕಾರ್ಯವ ಮಾಡುವುದು,
ಪಾಪಕಾರ್ಯ ತಪ್ಪದು! ನೀನು ಕೆಡಬೇಡ ಕಂಡೆಯಾ!
ಬೇಗನಂಬಿ ಪೂಜಿಸು, ಸೊಡ್ಡಳದೇವನ ಮರುಳೆ"

ಹುಟ್ಟಿನ ಬೆನ್ನುಹತ್ತಿಯೇ ಮರಣದ ಗಂಟು ಅಂಟಿಕೊಂಡಿದೆ. 'ಜಾತಸ್ಯ ಮರಣಂ ಧ್ರುವಂ' ಎಂಬಂತೆ ಮರಣವನ್ನು ತಪ್ಪಿಸುವುದು ಯಾರಿಗೂ ಸಾಧ್ಯವಿಲ್ಲ



ಆದುದರಿಂದ ಹೀನಕಾರ್ಯಮಾಡದೇ ದೇವಕಾರ್ಯಮಾಡಿ ನಿನ್ನ ಜನ್ಮವನ್ನು ಸಾರ್ಥಕಪಡಿಸಿಕೋ ಎಂಬ ವಾಣಿ ಮೇಲಿನ ವಚನದಲ್ಲಿ ನಿನದಿಸಿದೆ. 'ಮಾನವ ಜನ್ಮ ದೊಡ್ಡದು, ಸುಮ್ಮನೆ ಹಾಳುಮಾಡಿಕೊಳ್ಳಬೇಡ ಹುಚ್ಚಪ್ಪ' ಎಂದು ದಾಸ ವಾಣಿಯು ಮೊಳಗಿದೆ. ಮಾನವನಿಗೆ ಇತರ ಪ್ರಾಣಿಗಳಿಗಿಂತಲೂ ಹೆಚ್ಚಿನ ಸೌಲಭ್ಯ ವಿದೆ. ಆತನಿಗೆ ವಿಚಾರಶಕ್ತಿಯಿದೆ! ತಾರತಮ್ಯ ಭಾವವಿದೆ. ಇದು ಒಳ್ಳೆಯದು; ಇದು ಕೆಟ್ಟದು ಎಂಬುದು ತಿಳಿಯುತ್ತದೆ. ಆದರೂ ಮನುಷ್ಯ ದಾರಿತಪ್ಪಿ ಬೆಂಕಿ ಯಲ್ಲಿ ಬೀಳುತ್ತಾನೆ.

ಕಾರಣ ಆತನು ತನ್ನ ಮನಸ್ಸನ್ನು ನಿಗ್ರಹಿಸಿಕೊಂಡಿಲ್ಲ. ಆಸೆ ಆಮಿಷಗಳಿಗೆ ಬಲಿಯಾಗಿ ಮಾಡಬಾರದ ಕೆಲಸ ಮಾಡುತ್ತಾನೆ; ಹಣ ಅಧಿಕಾರಗಳ ಬಲದಿಂದ ಎಂಥ ಹೀನ ಕೆಲಸ ಮಾಡಲು ಹಿಂಜರಿಯದವನಾಗಿದ್ದಾನೆ. ಬಡತನವೆಂಬ ಮಂತ್ರವಾದಿಯೇ ಇವನಿಗೆ ಸರಿಯಾದ ಮದ್ದು ನೀಡುತ್ತಾನೆಂದು ಶರಣರು ನುಡಿದಿದ್ದಾರೆ. ಶರಣರು ತಮಗಾಗಿ ಏನನ್ನೂ ಬೇಡಿಕೊಂಡಿಲ್ಲ, ಅವರು ಬೇಡಿಕೊಂಡಿರುವುದು ಇದನ್ನೊಂದೇ:

"ಬ್ರಹ್ಮಪದವಿಯನೊಲ್ಲೆ,
ವಿಷ್ಣುಪದವಿಯನೊಲ್ಲೆ,
ರುದ್ರಪದವಿಯನೊಲ್ಲೆ,
ಇಂದ್ರಪದವಿಯನೊಲ್ಲೆ,
ಎಲ್ಲಕ್ಕೂ ಒಡೆಯನಾದ ಶಿವನ
ಪ್ರಮಥಗಣಂಗಳ ತಿಪ್ಪೆಯ ಮೇಲಣ
ಹುಳುವಾಗಿ ಹುಟ್ಟುವ ಪದವಿಯ
ಕರುಣಿಸು ಮಹಾಮಹಿಮ ಸೊಡ್ಡಳಾ"

ಎಂಥಹ ಹಸನಾದ ಬಂಧುರವಾದ ಸುಂದರ ಬದುಕು ಅವರದು? "ತ್ರೊತ್ತು ಕೆಲಸ ನಿತ್ಯವಾಗಲಿ" ಯೆಂಬ ಹಾರೈಕೆ ಅವರದು. ಸಕಲ ಜೀವಿಗಳಿಗೆ ಲೇಸನೇ ಬಯಸಿದ ಅವರ ಉದಾತ್ತ ಬದುಕಿನ ನೆರಳು ನಮಗೆ ಬಡಿಯಬೇಕಾಗಿದೆ. ಈ ಶರಣ ಸಂಸ್ಕೃತಿಯ ಅಮೃತ ಸರೋವರದಲ್ಲಿ ಮಿಂದು ಪಾವನರಾಗಬೇಕೆಂದು ಕೋರುವ ಈ ವಚನ ಗಮನಾರ್ಹವಾಗಿದೆ.

'ಗಂಗಾನದಿಯಲ್ಲಿ ಮಿಂದರು ಗಂಜಳದಲ್ಲಿ ಹೊರಳುವರೇ?
ಚಂದನವಿದ್ದಂತೆ ದುರ್ಗಂಧವ ಮೈಯಲ್ಲಿ ಪೂಸುವರೇ?
ಸುರಭಿಮನೆಯಲ್ಲಿ ಕರೆವುತ್ತಿರೆ ಹರಿವರೇ ಸೊಣಗನ ಹಾಲಿಂಗೆ?
ಬಯಸಿದಮೃತವಿದ್ದಂತೆ ಅಂಬಲಿನ ಸೆರೆದುಂಬಿ ಭ್ರಮಿತ

ಮಾನವಾ ನೀ ಕೇಳಾ,
ಪರಮ ಪದವಿಯಾನೀವ ಚೆನ್ನಸೊಡ್ಡಳನಿದ್ದಂತೆ
ಸಾವ ದೈವರ ನೋಂತರೆ ಕಾವುದೇ ನಿನ್ನಾ.

ಅದುದರಿಂದ ಸತ್ಯ ಶರಣರ ದರ್ಶನ ಪಡೆಯಂದು ಕೇಳಿಕೊಂಡಿರುವರು. ಆ ಸತ್ಯ ಶರಣರ ದರ್ಶನಮಾತ್ರದಿಂದಲೇ ಮಾಡಿದ ಪಾಪಗಳು ದೂರಾಗುತ್ತವೆ. ಈ ಮಾತನ್ನು ಈ ವಚನದಲ್ಲಿ ಪ್ರತಿಬಿಂಬಿಸಲಾಗಿದೆ.

ಮನದ ಸಂಚದೋಷವರಿಯೊಳಗೆ
ಮಿಂಚಿನ ಗೊಂಚಲು ಬಳ್ಳಿವರಿಯಿತ್ತಯ್ಯಾ
ಎನ್ನ ಕಾಯದ ಕಂಗೊಳಗೆ ನಿರುಪಮಸುಖ ಸಾಧ್ಯವಾಯಿತ್ತು.
ಬಯಸುವ ಬಯಕೆ ಕೈಸಾರಿತ್ತು
ಅರಸುವ ಅರಕೆ ನಿಂದಿತ್ತು.
ಅಹಾ ಕರತಳಾಮಲಕವಾಯಿತ್ತಲ್ಲ.
ಸತ್ಯ ಶರಣರ ದರುಶನವೇನ ಮಾಡದು :

ಇಂಥ ಶರಣರ ದರುಶನದಿಂದ ಪಾವನಗೊಂಡವನು ಅಂಗಕ್ಕೆ ಲಿಂಗಧಾರಣೆ ಮಾಡಿಕೊಳ್ಳಬೇಕು. ಆ ಲಿಂಗತತ್ವದ ಮಹಿಮೆ ಈ ವಚನದಲ್ಲಿ ವರ್ಣಿತವಾಗಿದೆ.

ಅಂಗ ಲಿಂಗಕ್ಕೆ ಗೂಡಾಯಿತ್ತು.
ಲಿಂಗ ಅಂಗಕ್ಕೆ ಗೂಡಾಯಿತ್ತು.
ಅಂಗ ಲಿಂಗ ಸಂಗವೆಂಬ ಸಂದುಳಿದು ನಿಜಲಿಂಗೈಕ್ಯವಾಯಿತ್ತು.
ಭಾವನಿರ್ಭಾವ ನಿಷ್ಪತ್ತಿಯಲ್ಲಿ.
ಮಹಾದಾನಿ ಸೊಡ್ಡಳಂಗೆ ಸರ್ವನಿರ್ವಾಣವಾಯಿತ್ತು.

ಅಂಗಾಂಗ ಸಾಮರಸ್ಯದಿಂದ ಮುಕ್ತಾತ್ಮನಾಗುತ್ತಾನೆಂಬ ಭಾವ ಇಲ್ಲಿದೆ ಆ ಘನವನ್ನು ಕಾಣುವ ಏಕೈಕಮಾರ್ಗವೆಂದರೆ ಲಿಂಗಪೂಜೆ. ಆ ಲಿಂಗಪೂಜೆಯ ಸುಖವನ್ನು ಹೀಗೆ ವರ್ಣಿಸಿದ್ದಾನೆ. ಸೊಡ್ಡಳಬಾಚರಸ ಪ್ರಭುದೇವರ ಕರುಣೆಯನ್ನು ಹಾಡಿಕೊಂಡಿದ್ದಾನೆ. ಶೂನ್ಯಸಂಪಾದನೆಯನ್ನು ಅಧರಿಸಿ ಹೇಳುವುದಾದರೆ, ಇವನು ಅನುಭವಮಂಟಪದಲ್ಲಿ ಓರ್ವ ಕ್ರಿಯಾಶೀಲ ಶ್ರೇಷ್ಠ ಶಿವಶರಣನಾಗಿದ್ದನೆಂಬುದಕ್ಕೆ ಆತನ ವಚನಗಳೇ ಸಾಕ್ಷಿ. ಆತನು ವೀರ ಮಹೇಶ್ವರ, ಶಿವಸರ್ವೋತ್ತಮತೆಯನ್ನು ಎತ್ತಿ ಹೇಳುವ ಇವನ ವಚನಗಳು ವೈಚಾರಿಕ ತಳಹದಿಯ ಮೇಲೆ ವಿಶ್ಲೇಷಣೆಗೊಂಡಿವೆ. ಉದಾಹರಣೆಗೊಂಡು ವಚನ ಇಲ್ಲಿ ಎತ್ತಿಕೊಂಡಿದೆ.

ವಿಷ್ಣು ಪರಿಪೂರ್ಣನಾದಡೆ
ಸೀತೆ ಕೆಟ್ಟಳೆಂದು ಅರಸಲೇಕೋ ?



ವಿಷ್ಣು ಪರಿಪೂರ್ಣನಾದಡೆ
ನವಪತ್ರವೇಲೆ ಕುಳಿತು
ಜಲಪ್ರಳಯದಲ್ಲಿ ಅಡಗಿದನೆಂಬ ಮಾತೇಕೋ ?
ವಿಷ್ಣುವಿನ ಬಾಣ ಸಮುದ್ರ ಕಡ್ಡಕಟ್ಟಿಯಾದಡೆ
ಕಪಿ ಕೋಡಗವ ಹಿಡಿತಂದು.
ಬೆಟ್ಟಗಟ್ಟಂಗಳ ಹಿಡಿತಂದು ಸೇತುವೆಯ ಕಟ್ಟಲೇಕೋ ?
ವಿಷ್ಣು ಪರಿಪೂರ್ಣನಾದಡೆ
ರಾವಣನ ವಧೆಗಂಜಿಧರೆಯ ಮೇಲೆ ಲಿಂಗಪ್ರತಿಷ್ಠೆಗಳ ಮಾಡಿ
ಪೂಜಿಸಲೇಕೋ ?
ಇಂತು ಬ್ರಹ್ಮಾಂಡದೊಳಗೆ ಸಿಕ್ಕಿ
ಸತ್ತು ಹುಟ್ಟುತ್ತಿಹ ದೇವತೆಗಳು ಒಬ್ಬರೂ ಪರಿಪೂರ್ಣರಲ್ಲ
ಮಹಾದಾನಿ ಸೊಡ್ಡಳನೊಬ್ಬನೆ ಪರಿಪೂರ್ಣನು.

ಏಕದೇವೋಪಾಸನೆ ಶರಣರು ಭಾರತೀಯ ಆಧ್ಯಾತ್ಮಕ್ಷೇತ್ರಕ್ಕೆ ಕೊಟ್ಟ ಮಹಾನ್ ಕೊಡಿಗೆ, ಈ ತತ್ವವನ್ನು ಎತ್ತಿಹಿಡಿದಿದೆ. ಮೇಲಿನ ವಚನ. ಅದು ದರಿಂದ ಈ ಭವಬಂಧನದಿಂದ ಬೇಗನೇ ಬಿಡುಗಡೆಯಾಗಬೇಕಿದ್ದರೆ, ಒಮ್ಮೆ ಶಿವ ಎನ್ನಿರೋ ಎನ್ನುವ ಶರಣವಾಣಿ ಈ ಕೆಳಗಿನ ವಚನದಲ್ಲಿ ಪ್ರತಿಧ್ವನಿಸಿದೆ.

ಶಿವ ಶಿವ ಬೇಡಿಕೊಳ್ಳಿರೇ ;
ಅಮೃತ ಮಥನದಲ್ಲಿ ದೈನ್ಯವಮಾಡಿದವರ
ಉಳುಹಿದಡೆ ದೇವನ ಬೇಡಿಕೊಳ್ಳಿರೇ ;
ದಕ್ಷಾಧ್ವರದಲ್ಲಿ ದೈನ್ಯವ ಮಾಡಿದವವನುಳಿಹಿದ ದೇವನ
ಶಿವ ಶಿವ ಎನುತ ಬೇಡಿಕೊಳ್ಳಿರೇ ;
ಅಜ ಹರಿಗಳ ಅವತಾರಂಗಳ
ಸಂಹಾರವ ಮಾಡಿದ ದೇವನ
ಶಿವ ಶಿವ ಎನುತ ಬೇಡಿಕೊಳ್ಳಿರೇ ;
ಅಖಿಳ ಬ್ರಹ್ಮಾಂಡಗಳ ಹೆತ್ತ ತಂದೆ
ನಮ್ಮ ಮಹಾದಾನಿ ಸೊಡ್ಡಳದೇವನ.

ಹೀಗೆ ವೀರಶೈವಧರ್ಮತತ್ವಗಳನ್ನು ಪ್ರತಿಪಾದಿಸಿದ ಇವನ ವಚನಗಳ ಸಮಗ್ರ ಸಂಪುಟವನ್ನು ಶಾಸ್ತ್ರೀಯವಾಗಿ ಸಂಪಾದಿಸುವ ಮಹಾಕಾರ್ಯದಲ್ಲಿ ತೊಡಗಿದ್ದೇನೆ. ಇವನೊಬ್ಬ ಶ್ರೇಷ್ಠ ವಚನಕಾರ ತತ್ವಪ್ರತಿಪಾದಕ. ಈ ಅಜ್ಞಾತ ಶರಣನ ಬಗೆಗೆ ಕನ್ನಡಿಗರು ತಿಳಿದುಕೊಳ್ಳಬೇಕಾದ ಅನೇಕ ಮಹತ್ವದ ಅಂಶಗಳಿವೆಯೆಂಬುದನ್ನು ಮಾತ್ರ ಹೇಳಿ ಈ ಲೇಖನಕ್ಕೆ ಮಂಗಲ ಕೋರುತ್ತೇನೆ. ●

# ಪ್ರೇಮದಲ್ಲಿ ಆತ್ಮದ ನಿರಂತರ ಸ್ವಾತಂತ್ರ್ಯವಿದೆ

—ಜೆ. ಶಾರದರಾಜಶೇಖರ್
847, 4ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-40.

ಪ್ರಪಂಚದ ಮಹಾ ಪುರುಷರು ಪ್ರಪಂಚದ ದುಃಖಗಳನ್ನು ಅನುಭವಿಸುತ್ತ ಅಲ್ಲಿಯೇ ಕೆಲಸ ಮಾಡುತ್ತಾರೆ. ಬುದ್ಧನು ಮೈತ್ರಿಯನ್ನು ಗೀತೆಯು ಸ್ನೇಹವನ್ನು, ಬಸವಣ್ಣನವರು ದಯೆಯನ್ನು ಬೋಧಿಸಿದಾಗ, ನಾವು ಇತರರನ್ನು ಪ್ರೀತಿಯಿಂದಲೇ ಅರ್ಥ ಮಾಡಿಕೊಳ್ಳಬಹುದು. ಪ್ರೇಮದಲ್ಲಿ ಆತ್ಮದ ನಿರಂತರ ಸ್ವಾತಂತ್ರ್ಯವಿದೆ, ಮನುಷ್ಯ ದೃಢವಾಗಿ ಬೇರೂರಿ ಇರಬೇಕೆಂದರೆ ಜೀವನದಿಂದ ಬಲಪಡೆಯಲು ನಮ್ಮ ತಿಳಿಸಬೇಕು. ಜೀವನವು ಒಂದು ಸಾಹಸವೆಂಬಂತೆ ಅದನ್ನು ಎದುರಿಸಬೇಕು. ಅದರ ಸಂಭಾವ್ಯತೆಗಳಿಗೆ ಪೂರ್ಣ ಅವಕಾಶ ಒದಗಿಸಬೇಕು. ಧರ್ಮ ಹಲವಾರು ಭಾಷೆಗಳಲ್ಲಿ ಮಾತನಾಡುತ್ತದೆ. ಅದರ ಬಣ್ಣ ವಿಭಿನ್ನವಾದುದು, ಆದರೂ ಅದಕ್ಕೆ ನೈಜವಾದ ಒಂದು ಧ್ವನಿಯಿದೆ, ಅದೇ ಮಾನವ ಪ್ರೀತಿ, ಅನುಕಂಪ, ದಯೆ, ಈ ಧ್ವನಿ ನಮಗೆ ಸಾಧ್ಯವಾದಷ್ಟೂ ಪ್ರಯತ್ನಶೀಲರಾಗಿ ಈ ಧ್ವನಿಯನ್ನು ನಾವು ಕೇಳಿಸಿಕೊಳ್ಳಬೇಕು.

ಒಂದು ಯುಗದ ಅವಸಾನ ಮತ್ತೊಂದು ಯುಗದ ಆರಂಭ ಈ ಪರಿಸ್ಥಿತಿಯಲ್ಲಿ ನಾವು ಉದ್ವಿಗ್ನರಾಗುವುದು ಸಹಜವೇ. ನಮ್ಮ ಇರುವ ಸಾಮಾಜಿಕ ವ್ಯವಸ್ಥೆಯಿಂದ ಆಳವಾದ ಭಾವನೆಗಳನ್ನು ಸಮಾಜವು ನಿಬಂಧನೆಗಳಿಂದ ಮುಚ್ಚಿ ಕುಲಗೆಡಿಸಿದೆ.

ಇದಕ್ಕೆ ಬಹುಜನರಲ್ಲಿ ಇರುವ ಅತ್ಯಂತ ಭಯಾನಕವಾದ ದಾರಿದ್ರ್ಯವೂ ಅಜ್ಞಾನವೂ ಸೇರಿದೆ. ಪ್ರತಿಯೊಬ್ಬನೂ ತನಗೆ ಬೇಕಾದಂತೆ ಜೀವನ ನಡೆಸುವುದು ಅಸಾಧ್ಯವಾಗಿದೆ, ತುಂಬ ಕಾಲದಿಂದ ಬಂದ ಸಾಮೂಹಿಕ ದಬ್ಬಾಳಿಕೆಯಿಂದ ವ್ಯಕ್ತಿ ನಲುಗಿದ್ದಾನೆ, ಸಂಪ್ರದಾಯದ ವಿರುದ್ಧ ನಿಲ್ಲುವವನ ಪಾಲಿಗೆ ಬೈಗಳು, ನಿಂದನೆ, ಬಹಿಷ್ಕಾರ ಮತ್ತು ಏಕಾಂತಸ್ಥಿತಿ ಒದಗುತ್ತದೆ. ವ್ಯಕ್ತಿ ಹೋರಾಟದಲ್ಲಿ ವಿಫಲನಾಗಿದ್ದಾನೆ,

ಮಾನವ ಬಾಂಧ್ಯಗಳಲ್ಲಿ ಅತಿ ಪವಿತ್ರವಾದುದು ಪ್ರೇಮ, ಆತ್ಮ ನಿಯಂತ್ರಣ, ಮತ್ತು ಪರಿತ್ಯಾಗದ ಸುಂದರ ಗುಣಗಳನ್ನು ಹೆಂಗಸರಿಂದ ಮಾತ್ರ ನಿರೀಕ್ಷಿಸುತ್ತೇವೆ ಎಲ್ಲಿಯವರೆಗೆ ನಮ್ಮ ಹೆಂಗಸರನ್ನು ಪುರುಷರ ದಾಸಿಯರು, ಅವರ ಸ್ವಚ್ಛಂದತೆಗೆ ಗೊಂಬೆಗಳು ಎಂದು ಭಾವಿಸುತ್ತೇವೋ ಅಲ್ಲಿಯವರೆಗೆ ಸಾಂಘಿಕ ವ್ಯವಸ್ಥೆಯಲ್ಲಿ ಅನಾಚಾರ ಇದ್ದೇ ಇರುತ್ತದೆ. ಹೆಂಗಸರ ಗುಣ ಪಾತಿವ್ರತ್ಯ ಮತ್ತು ಗಂಡನಿಗೆ ವಿಧೇಯತೆ ಎಂದು ಹೇಳುವ ಸಂಪ್ರದಾಯವು ಗಂಡಸಿನ ದಬ್ಬಾಳಿಕೆಗೆ ಕ್ಷುಲ್ಲಕವಾದ ಸಮಾಧಾನ, ಗಂಡಸಿನಲ್ಲಿ ಯಾವುದು ಸದ್ಗುಣವೋ ಹೆಂಗಸಿನಲ್ಲೂ ಅದೇ ಸದ್ಗುಣ ನಮ್ಮ ಮಧ್ಯೆ

ಹೆಂಗಸರನ್ನು ತಮ್ಮ ಕಾಮಕ್ಕೆ ಬೇಕಾದಂತೆ ಉಪಯೋಗಿಸಿಕೊಳ್ಳುವ ನಿಷ್ಕರುಣಿಗಳಾದ ಗಂಡರಿರುವುದು ದುರದೃಷ್ಟ. ಅವರು ಮಾನವ ಮೃಗಗಳು, ವಿಷಯಕ್ಕೆ ಗುಲಾಮರು, ವ್ಯಭಿಚಾರವೆಂದರೆ ಪ್ರೇಮವಿಲ್ಲದ ಸಂಭೋಗ, ಇದು ಮದುವೆಯಾದವರಲ್ಲೂ ಮದುವೆಯಾಗದವರಲ್ಲೂ ಸಮವಾದುವೇ, ಯಾವಳಾದರೂ ಹೆಂಗಸು ತನ್ನ ಪತಿಯನ್ನು ಪ್ರೀತಿಸದೆ ಅವನ ಹೆಂಡತಿ ತಾನು ಅವನಿಗೆ ವಶಳಾಗುವುದು ಕರ್ತವ್ಯ ಎಂಬಷ್ಟೇ ಕಾರಣದಿಂದ ಅವನ ಕಾಮಕ್ಕೆ ವಶಳಾದರೆ ಅದರಿಂದ ಅವಳಿಗೂ ಹಾನಿ, ತನ್ನ ಹಕ್ಕನ್ನು ಚಲಾಯಿಸಿದ ಗಂಡನಿಗೂ ಹಾನಿ, ಪ್ರೇಮವೆಂಬುದು ಆಧ್ಯಾತ್ಮಿಕವಾದುದು, ಸುಂದರವಾದುದು, ಅದು ಅಂತಃಸಾಕ್ಷಿಯ ರುಚಿಯ ಮಾತು, ಪ್ರೀತಿಯಿಲ್ಲದ ಗ್ರಾಹಸ್ಥ್ಯ ಜೀವನ ಗುಲಾಮಗಿರಿಯಂತೆ, ಧರ್ಮದ ಪಂಡಿತರ ಅಥವಾ ಸಾಮಾಜಿಕ ನಿಯಮಗಳ ಅಡಿಯಾಳಾಗುವುದು ಆತ್ಮಹನನ, ತನ್ನ ಅಂತರಾಳದ ಆತ್ಮನಿಗೆ ವಿಧೇಯನಾಗುವುದು ಜೀವನದ ಮುಖ್ಯ ಕರ್ತವ್ಯ, ಸಮನ್ವಯಕ್ಕಿಂತ ಸೌಂದರ್ಯ ಹೆಚ್ಚಿನದು. ಸಾಮಂಜಸ್ಯಕ್ಕಿಂತ ಸತ್ಯ ಹೆಚ್ಚಿನದು. ಹಾಗೆಯೇ ನಿಯಮಕ್ಕಿಂತ ಪ್ರೇಮ ಹೆಚ್ಚಿನದು, ಬೆಂಕಿಯಂತೆ ಅದು ಎಲ್ಲವನ್ನೂ, ಶುದ್ಧಿಗೊಳಿಸುತ್ತದೆ.

ಕಾನೂನಿನ ವಿಧಾತರೂ ರಕ್ಷಕರೂ ನಮ್ಮ ಹೆಂಗಸರಿಗೂ ಆತ್ಮವುಂಟು ಎಂಬುದನ್ನು ಅರಿತಿಲ್ಲ. ಅವರಿಗೂ ಕಾಮನೆಗಳುಂಟು, ಅವರ ಸ್ವಪ್ನಗಳನ್ನೂ, ಆಕಾಂಕ್ಷೆಗಳನ್ನೂ, ಪಾಲ್ಗೊಳ್ಳುವವರನ್ನು ಅವರು ನಿರೀಕ್ಷಿಸುತ್ತಾರೆ ಎಂಬುದನ್ನು ಅರಿತಿಲ್ಲ. ಒಬ್ಬ ಗಂಡಸು ಒಬ್ಬಳು ಹೆಂಗಸು ಪರಸ್ಪರ ಸಮರ್ಪಿಸಿಕೊಂಡಾಗ ಅವರ ಸಾಮರ್ಥ್ಯ ಪ್ರಶಸ್ತಿ, ಐಶ್ವರ್ಯ ಇವು ಗಣನೆಗೆ ಬರುವುದಿಲ್ಲ. ಅವರ ದೌರ್ಬಲ್ಯಗಳು, ಅವರ ಅರ್ಹತೆ, ಅವರ ಹೃದಯದ ಅಗತ್ಯಗಳು ಇವು ಮನುಷ್ಯ ತನ್ನ ಕೈಯಿಂದ ನಿರ್ಮಿಸದೆ ಹೃದಯದ ಪ್ರೀತಿಯಿಂದ ನಿರ್ಮಿಸಿದ ಕ್ಷೇತ್ರದಲ್ಲಿ ಸೇರಿ ನಿಲ್ಲುತ್ತವೆ, ಈ ತರಹದ ಪ್ರೀತಿಗೆ ಹೊರಗಣ ಸಮ್ಮತಿ ಇಲ್ಲದಿದ್ದರೂ ಅವರ ಸಮಾವೇಶ ಪವಿತ್ರ ಸಿದ್ಧವಾದುದು, ಹಳೆಯ ಹಲವು ಸಂಗತಿಗಳು ಮುರಿದುಬಿದ್ದು ಹೊಸ ಭಾವನೆಗಳು ಸಾವಿರಾರು ಹುಟ್ಟಿಕೊಳ್ಳುತ್ತಿರುವ ಈ ಕಾಲದಲ್ಲಿ ಪ್ರೇಮ ಪ್ರೀತಿಯ ಬಗೆಗೂ ವಿಶಾಲ ಮನೋಭಾವ ತಳೆಯುವುದು ಅಗತ್ಯವಾಗಿದೆ, ನಿಜ ಮೌಲ್ಯಗಳನ್ನು ಎತ್ತಿ ಹಿಡಿಯುವ ಕಾಲ ಸನ್ನಿಹಿತವಾಗತೊಡಗಿದೆ, ಮನುಷ್ಯ ಮಾಡಿದ ಅನೇಕ ನಿಯಮಗಳು ಒಮ್ಮೊಮ್ಮೆ ಡಂಭಾಚಾರಗಳಂತೆ ಕಾಣುತ್ತವೆ.

ನಮ್ಮ ಒಳಗಿನ ಬೆಳಕಿನಂತೆ ಬಾಳದಿರುವುದು ನಿಜವಾದ ಪಾಪ. ನಮ್ಮ ಸುತ್ತಲಿನ ಜನ ಜಂಗುಳಿಯ ಭಾವನೆಗಳಂತೆ ಬಾಳದಿರುವುದು ಸಾಂಪ್ರದಾಯಿಕವಾದ ಪಾಪ. ನಾವು ಸಾಂಪ್ರದಾಯಿಕ ಪಾಪಕ್ಕೆ ಹೆದರಿ ನಿಜವಾದ ಪಾಪವನ್ನು ಮಾಡುತ್ತೇವೆ ಅಗತ್ಯ ಬಿದ್ದರೆ ಸಂಪ್ರದಾಯಗಳನ್ನು ವಿರೋಧಿಸಿ ಒಳಗಿನ ಬೆಳಕಿನಂತೆ ಬಾಳುವುದೇ ಮನುಷ್ಯನ ಕರ್ತವ್ಯ.





ವಿಧಾನ ಸಭೆಯಿಂದ ಗ್ರಾಮ ಸಭೆಗೆ, ಜಿಲ್ಲಾ ಪರಿಷತ್ ವಿಧೇಯಕ

ರಾಜ್ಯ ಸರ್ಕಾರದ ಜಿಲ್ಲಾ ಪರಿಷತ್ ವಿಧೇಯಕ ರಾಷ್ಟ್ರಪತಿಯವರ ಅಂಗೀಕಾರ ಪಡೆದ ಮೇಲೆ 14-8-85 ರಂದು ಜಾರಿಗೆ ಬಂದಿತು.

ಸಮಗ್ರ ಭಾರತದಲ್ಲಿಯೇ ಕೈಗೊಂಡಿರುವ ಅಧಿಕಾರ ವಿಕೇಂದ್ರೀಕರಣ ಜಿಲ್ಲಾ ಪರಿಷತ್ ವಿಧೇಯಕ ಒಂದು ದಿಟ್ಟ ಕಾರ್ಯಕ್ರಮ. ರಾಜ್ಯದ ಸರ್ವತೋಮುಖ ಏಳಿಗೆಗೆ ಗ್ರಾಮ ರಾಜ್ಯದಿಂದ ರಾಮರಾಜ್ಯವನ್ನು ಕಟ್ಟುವ ಉದ್ದೇಶವಿದು. ಇನ್ನು ಆಡಳಿತ ವಿಧಾನ ಸೌಧದಿಂದಲ್ಲ. ಅದು ಗ್ರಾಮದಿಂದ ಆಗಬೇಕು. ಸ್ವಾತಂತ್ರ್ಯ ಪೂರ್ವದಲ್ಲಿಯೇ ಇಂತಹ ಅಪೂರ್ವ ಕನಸನ್ನು ಬಾಪೂಜಿ ಕಂಡಿದ್ದರು. ಅಂತಹ ಅಪೂರ್ವ ಕನಸು ನನಸಾಗಿದೆ.

ರಾಜ್ಯದ ಸರ್ವತೋಮುಖ ಏಳಿಗೆ ಸಾಧನೆ ಮತ್ತು ಯಾವ ಕಾರ್ಯಕ್ರಮ ಹಾಗು ಕೆಲಸ ಕಾರ್ಯಗಳು ಎಲ್ಲಿ ನಡೆಯಬೇಕೆಂಬ ನಿರ್ಧಾರ ಇನ್ನು ರಾಜಧಾನಿಯಿಂದಲ್ಲ ಬಡತನ ನಿರ್ಮೂಲನಾ ಕ್ರಮ, ಅಭಿವೃದ್ಧಿ ಕಾರ್ಯಕ್ರಮಗಳ ಕೆಲಸ ಹೇಗೆ ನಡೆಯಬೇಕೆಂಬ ಎಲ್ಲ ನಿರ್ಣಯ ಹಾಗೂ ಕಾರ್ಯ ನಿರ್ವಹಣೆ ನಿಮ್ಮಿಂದ. ನೀವು ಸರ್ಕಾರದ ಬಳಿ ಹೋಗಬೇಕಿಲ್ಲ. ಸರ್ಕಾರವೆ ನಿಮ್ಮ ಬಳಿ ಬಂದು ಕಾರ್ಯ ನಿರ್ವಹಣೆ, ಮತ್ತು ಅಭಿವೃದ್ಧಿಯನ್ನು ವೀಕ್ಷಿಸುವುದು.

ಗ್ರಾಮ ಸಭೆಯನ್ನೇ ಈ ವ್ಯವಸ್ಥೆಯ ಮೂಲ ಘಟಕವನ್ನಾಗಿ ಪರಿಗಣಿಸಲಾಗುತ್ತದೆ. ಅಲ್ಲದೆ ಮಂಡಲ ಪಂಚಾಯಿತಿಗಳ ಒಕ್ಕೂಟವೇ ಕೇಂದ್ರ ವ್ಯವಸ್ಥೆಯಾಗುವುದು

ಅಂಗರಚನೆ :—

1) ಎಲ್ಲ ಮತದಾರರು ಆ ಗ್ರಾಮದ ಗ್ರಾಮ ಸಭೆಯ ಸದಸ್ಯರಾಗಿರುವರು. ಅಲ್ಲದೆ, ಜಿಲ್ಲಾ ಪರಿಷತ್ತಿಗೆ ನಡೆಯುವ ಚುನಾವಣೆಯಲ್ಲಿ ಮತದಾನದ ಹಕ್ಕನ್ನು ಪಡೆದಿರುತ್ತಾರೆ.

2) ಪ್ರತಿ 400 ಗ್ರಾಮ ಸದಸ್ಯರಿಗೆ ಒಬ್ಬರಂತೆ ಮಂಡಲ ಪಂಚಾಯಿತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು.

3) ಹೀಗೆ ಚುನಾಯಿಸಲ್ಪಟ್ಟ ಸದಸ್ಯರು ಚುನಾಯಿತ ಸದಸ್ಯರಲ್ಲಿ ಒಬ್ಬ ಪ್ರಧಾನ ಮತ್ತು ಉಪ ಪ್ರಧಾನರನ್ನು ಮಂಡಲ ಪಂಚಾಯಿತಿಗೆ ಚುನಾಯಿಸುವರು.

4) ಎಲ್ಲಾ ತಾಲ್ಲೂಕಿನಿಂದ ಪ್ರತಿ 28,000 ಜನಸಂಖ್ಯೆಗೆ ಮತ್ತು ಕೊಡಗು ಜಿಲ್ಲೆಯಲ್ಲಿ ಪ್ರತಿ 12,000 ಜನಸಂಖ್ಯೆಗೆ ಒಬ್ಬರಂತೆ ಜಿಲ್ಲಾ ಪರಿಷತ್ತಿಗೆ ಒಬ್ಬ ಸದಸ್ಯನನ್ನು ಚುನಾಯಿಸುವರು.

5) ಮಂಡಲ ಪಂಚಾಯಿತಿಯಲ್ಲಿ ಕೂಡ ದುರ್ಬಲ ಮತ್ತು ಅನುಸೂಚಿತ ಜಾತಿ ಪಂಗಡಗಳಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಉಂಟು (ತಾಲ್ಲೂಕಿಗೆ ಒಬ್ಬರಂತೆಯಾದರೂ ಮಹಿಳಾ ಸದಸ್ಯರು ಇರುವರು.)

6) ಚುನಾಯಿಸಲ್ಪಟ್ಟ ಸದಸ್ಯರಲ್ಲದೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಅಧ್ಯಕ್ಷ ಜಿಲ್ಲೆಯ ಶಾಸಕರು ಜಿಲ್ಲಾ ಪರಿಷತ್ತಿನ ಸದಸ್ಯರಾಗಿರುವರು.

7) 18 ವರ್ಷ ವಯಸ್ಸಿನ ಪ್ರತಿಯೊಬ್ಬ ಗ್ರಾಮ ನಿವಾಸಿಗೆ ಮತದಾನದ ಹಕ್ಕು ಇರುತ್ತದೆ. ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲುವವರಿಗೆ 25 ವರ್ಷ ತುಂಬಿರಬೇಕು.

8) ಜನರಿಂದ ನೇರವಾಗಿ ಚುನಾಯಿತರಾದ ಸದಸ್ಯರು ಮಾತ್ರ ಅಧ್ಯಕ್ಷ ಹಾಗೂ ಉಪಾಧ್ಯಕ್ಷರಾಗಿ ಆಯ್ಕೆಯಾಗಬಲ್ಲರು.

—ಕರ್ನಾಟಕ ವಾರ್ತೆ

## ' ಹಳೆಯ ವಿದ್ಯಾರ್ಥಿ ಸಂಘದ '

### ಆಜೀವ ಸದಸ್ಯತ್ವ ಪಡೆದಿರುವವರು

ಸರ್ವಶ್ರೀ

201 ನಂಜೇಗೌಡ, ಸ ಶೆಟ್ಟಿಹಳ್ಳಿ, ನವಿಲೆ ಅಂಚೆ,
ಚಿಕ್ಕನಾಯ್ಕನಹಳ್ಳಿ ತಾಲ್ಲೂಕ್–572226

202 ವಿದ್ವಾನ್ ಕೆ. ಎಂ. ಬಸಪ್ಪ, ನಂ. 510 8 ನೇ ಮುಖ್ಯ ರಸ್ತೆ, ವಿಜಯನಗರ
ಬೆಂಗಳೂರು–560040

203 ಹೆಚ್. ಸಿ. ಸಿದ್ದಪ್ಪ. ನಂ 227, ಕತ್ತರಗುಪ್ಪೆ, ಬನಶಂಕರಿ, 3 ನೇ ಹಂತ
ಬೆಂಗಳೂರು–560085

204 ಎಂ. ಆರ್. ಶಾಂತಕುಮಾರ್, ಉಪಾಧ್ಯಾಯರು, ಸಂಸ್ಕೃತ ಕಾಲೇಜ್,
ಸಿದ್ದಗಂಗಾ ಮಠ

205 ಸಿ. ವೀರಭದ್ರಯ್ಯ, ದೈಹಿಕ ಶಿಕ್ಷಣ ಉಪಾಧ್ಯಾಯರು,
ಎಸ್. ಬಿ. ಹೆಚ್- ಎಸ್ ಸಿದ್ಧಗಂಗಾ

206 ಪಿ. ಎನ್ ಲಿಂಗಪ್ಪ, ನಂ 28/19, 19ನೇಮುಖ್ಯರಸ್ತೆ,
ವಿಜಯನಗರ ಬೆಂಗಳೂರು– 560040

207 ಶಿವಲಿಂಗಪ್ಪ, ಲೆಕ್ಕಾ ತನಿಖಾಧಿಕಾರಿ, ಭಾರತೀಯ
ವಿದ್ಯಾಭವನ ಬೆಂಗಳೂರು– 560001

208 ಶ್ರೀ ಶ್ರೀ ಸಿದ್ಧಲಿಂಗಶಿವಾಚಾರ್ಯ ಸ್ವಾಮಿಗಳು ಅಂಕನಹಳ್ಳಿ ಗವಿಮಠ
ಕುಣಿಗಲ್ ತಾಲೋಕ್

209 ಪಿ. ಶಿವಪ್ಪ. ಉಪನ್ಯಾಸಕರು ಹುಲಿಕೆರೆ, ರಾಮನಗರ ತಾಲೋಕ್.

210 ಬಿ.ಕೆ. ಲಿಂಗಯ್ಯ, ಸಹಾಯಕ ಪ್ರಾಧ್ಯಾಪಕ ಸಂಸ್ಕೃತ ಕಾಲೇಜು,
ಸಿದ್ಧಗಂಗಾ ಮಠ.

211 ಬಿ. ಮರುಳಸಿದ್ಧಪ್ಪ, ಉಪಾಧ್ಯಾಯರು ಎಸ್.ಬಿ.ಎಚ್.ಎಸ್
ಸಿದ್ಧಗಂಗಾ ಮಠ 562104.

212 ವೈ.ಎಂ. ವಿರೂಪಾಕ್ಷಯ್ಯ, ಕನ್ನಡ ಪಂಡಿತ್ ಸರ್ಕಾರಿ ಕಿರಿಯ ಕಾಲೇಜ್
ಸವನೂರ್

213 ಕೆ.ಬಿ. ರಾಜಶೇಖರ್, ಕುಂಬರಡಿ ಸಕಲೇಶಪುರ ತಾಲೋಕ್

214 ಶ್ರೀ ಶ್ರೀ ಶಿವಲಿಂಗ ಸ್ವಾಮಿಗಳು, ತಣ್ಣೀರಹಳ್ಳದ ಮಠ ಬಿ ಎಂ. ರಸ್ತೆ ಹಾಸನ

215 ಶ್ರೀ ಬಿ ವಿ. ಮುಳ್ಳಪ್ಪ, ಮುಖ್ಯೋಪಾಧ್ಯಾಯರು ವಿನಾಯಕ ಪ್ರೌಢಶಾಲೆ
ಕಳಸಾಪುರ ಅಂಚೆ, ಕಡೂರು ತಾಲೋಕ್.

ಮುಂದುವರಿಯುತ್ತದೆ.



## ನಾಮಜಪದ ಮಹಿಮೆ

—ದೇವೇಂದ್ರಪ್ಪ ಮಹಾದೇವಪ್ಪ ಬಡಿಗೇರ
ಶಾಲಾ ಶಿಕ್ಷಕರು, ಗೋಕಲು(ಹುಬ್ಬಳ್ಳಿ)
ಉಚಿತ ಆಯುರ್ವೇದ ಚಿಕಿತ್ಸಾ ಸಲಹೆಗಾರರು(R M P) ಸಾಹಿತ್ಯ ಸುಧಾಕರ

ಯಾವನು ಕಲ್ಯಾಣವನ್ನು ಬಯಸುವನೋ ಅವನು ನಾಮಜಪವನ್ನು ಮರೆಯಬಾರದು. ನಾಮಜಪದಲ್ಲಿ ಚಿತ್ತವನ್ನು ರೂಢಿಸಲು ಮನಸ್ಸಿನ ಇಚ್ಛೆಯು ಪೂರ್ಣವಾಗುವುದು. ನಾಮಸ್ಮರಣೆಯಿಂದ ದುಃಖಗಳು ದೂರಾಗುವವು. ನಾಮದ ಬಲದಿಂದ ಆತಂಕಗಳು ದೂರಾಗುವವು. ಮತ್ತು ಉತ್ತಮಗತಿ ಹೊಂದುವನು. **ಸುಖ ಮತ್ತು ದುಃಖದ ನಿಯಮಗಳು:–** ಮತ್ತು ನಾಮಸಾಧನೆಯ ಸೌಲಭ್ಯಗಳು.

ಜಗತ್ತಿನಲ್ಲಿ ಎರಡು ಫಲಗಳು ಒಂದು ಸುಖ ಮತ್ತೊಂದು ದುಃಖ. ಸುಖವು ಪುಣ್ಯದ ಫಲವು ದುಃಖವು ಪಾಪದ ಬಲವು. ಇದು ಕೇವಲ ಶಾಸ್ತ್ರಸಿದ್ಧಾಂತವಾಗಿರದೆ ನಿಸರ್ಗನಿಯಮವೂ ಆಗಿರುವುದು. ನಿಸರ್ಗದ ನಿಯಮವೆಂದರೆ ಅದು ಹೊಂದಲಾಗದ ಮತ್ತು ಅಸಾಧ್ಯವೇ ಆಗಿದೆ. ಪೃಥ್ವಿಮೇಲಿನ ಯಾವುದೇ ಸರಕಾರದ (ರಾಜನ) ಕಾಯದೆಗಳಿಗಿಂತ ನಿಸರ್ಗ ರಾಜನ ಕಾಯ್ದೆಗಳು ಹೆಚ್ಚು ಕಠಿಣವಾಗಿವೆ ಈ ಕಾಯ್ದೆಗಳಲ್ಲಿ ಕ್ಷಮೆ ಎಂಬ ಶಬ್ದವೇ ಸಿಗಲಾರದು. ನಿಸರ್ಗದ ರಾಜ್ಯದಲ್ಲಿ ತಪ್ಪು ಎಂದೂ ಮುಚ್ಚಿ ಕೊಂಡಿರುವುದಿಲ್ಲ. ನಿಸರ್ಗರಾಜನ ಕಾಯ್ದೆ ಎಂದರೆ ನಿಯಮಗಳನ್ನು ನಮ್ಮ ಪೂರ್ವಜರು ಅತೀಂದ್ರಿಯದೃಷ್ಟಿಯಿಂದ ತಿಳಿದು ಜಗತ್ತಿನ ಕಲ್ಯಾಣಕ್ಕಾಗಿ ಸ್ಮೃತಿ ಮತ್ತು ಶ್ರುತಿ ರೂಪದಿಂದ ಬರೆದು ಇಟ್ಟಿದ್ದಾರೆ. ಮನುಷ್ಯನಿಗೆ ಸುಖವೆಂದರೆ ಪುಣ್ಯದ ಫಲವು ಬೇಕು, ಆದರೆ ಪುಣ್ಯವನ್ನು ಮಾಡುವುದು ಬೇಡ. ಇದರಂತೆಯೇ ಅವನಿಗೆ ದುಃಖವೆಂದರೆ ಪಾಪದ ಫಲವು ಬೇಡ. ಆದರೆ ಅವರು ಪಾಪವನ್ನು ಹೆಚ್ಚಾಗಿ ಮಾಡುವರು. ಅದ್ದರಿಂದ ನಿಸರ್ಗ ನಿಯಮದಂತೆ ಅವರ ಜೀವನವು ದುಃಖ ಮಯವಾಗುವುದು. ಈ ದಿನಗಳಲ್ಲಿ ಯಾರು ಸುಖಿಗಳಾಗಿ ಕಾಣುವರೋ ಅದು ಅವರ ಹಿಂದಿನ ಜನ್ಮದ ಪುಣ್ಯದ ಫಲವು. ಯಾರಿಗೆ ಸುಖವು ಮತ್ತು ಐಶ್ವರ್ಯವು ಬೇಕಾಗಿರುವದೋ ಅವರು ಹೆಚ್ಚಾಗಿ ಪುಣ್ಯ ಮಾಡಬೇಕೆಂದು ಸಿದ್ಧವಾಗುತ್ತದೆ. ಆದರೆ ಮೊದಲಿನ ಕಾಲದಂತೆ ಅಶ್ವಮೇಧ ಮೊದಲಾದ ಯಜ್ಞ ಅಲ್ಲದೆ ಗಜ–ಅಶ್ವ–ಭೂಮಿ–ಗೋ–ರತ್ನ–ಸುವರ್ಣ ಮುಂತಾದ

ದಾನ ಮಾಡುವ ಸಾಮರ್ಥ್ಯವು ಈಗಿನ ಕಾಲದಲ್ಲಿ ಜನರಲ್ಲಿ ಇಲ್ಲ. ಚಾಂದ್ರಾಯಣ ವ್ರತ, ಪಂಚಾಗ್ನಿ ಸಾಧನೆಗಳಂತಹ ಕಷ್ಟತರವಾದ ತಪಸ್ಸು ಮಾಡುವ ಶಕ್ತಿ ಸಾಮಾನ್ಯ ಜನರಲ್ಲಿ ಇಲ್ಲ. ಇದನ್ನು ತಿಳಿದು ಕಡಿಮೆ ಕಷ್ಟದಿಂದ ಹೆಚ್ಚು ಫಲವು ದೊರೆಯುವಂತ ಕೌಶಲ್ಯವೆಂದರೆ ಯಾವುದಕ್ಕೆ ಶ್ರೀಕೃಷ್ಣನು ಗೀತೆಯಲ್ಲಿ 'ಯೋಗ, ಅಂದಿರುವನೋ [ಯೋಗಾಕರ್ಮಸು ಕೌಶಲ್ಯಮ್] ಅ ಕರ್ಮ ಕೌಶಲ್ಯ ಅರ್ಥಾತ್ ಆ ನಾಮ ಯೋಗವನ್ನು ಪೂಜ್ಯರಾದವರು ಕಲ್ಯಾಣ ಬುದ್ಧಿಯಿಂದ ಕಲಿಯುಗದಲ್ಲಿ ಪ್ರಕಟಿಸಿದ್ದಾರೆ. ಮತ್ತು ಅದು ಶಾಸ್ತ್ರ ಸಿದ್ಧವೂ ಆಗಿರುವುದು. ಕೋಟ್ಯಾನು ಕೋಟಿ ಆಕಳ ದಾನ, ಸಮುದ್ರದಿಂದ ಮೊರೆಯಾದ ಪೃಥ್ವಿ ದಾನ, ಕಾಶಿ ಪ್ರಯಾಣಪಂಥ ಪುಣ್ಯ ಕ್ಷೇತ್ರ ವಾಸವು ಯಜ್ಞದಿಂದ ಕೂಡಿದ ಸುವರ್ಣ ದಾನಗಳು ಇವು ಭಗವಂತನ ನಾಮ ಸ್ಮರಣೆ ಎಂಬ ಪುಣ್ಯದ ಸರಿಸಮಾನವಾಗಲಾರವು. ಹೀಗೆ ಶಾಸ್ತ್ರಗಳ ಮತ್ತು ಸಂತ ಶರಣರ ವಚನಗಳು ಇವೆ. ಅವು ಅರ್ಥಪರವಾಗಿವೆ. ಕೇವಲ ಹೊಗಳಿದಂತವುಗಳು ಅಲ್ಲ. ಭಾವವುಳ್ಳ ಜನರನ್ನು ಮೋಸಗೊಳಿಸುಲು ಶಾಸ್ತ್ರಕಾರರು ಮತ್ತು ಶಾಂತರು ಶರಣರು ಅವುಗಳನ್ನು ಹೇಳಿರುವುದಿಲ್ಲ. ಆದರೆ ಶ್ರೇಷ್ಠವಾದ ಕಲ್ಯಾಣ ಬುದ್ಧಿಯಿಂದ ಜೀವಿಗಳಿಗೆ ಕಲ್ಯಾಣ ಮಾರ್ಗ ತೋರಿಸಿಕೊಡಲು ಹೇಳಿದ್ದಾರೆ.

ಬೇರೆ ಬೇರೆ ಪಾಪಗಳಿಗೆ ಬೇರೆ ಬೇರೆ ಪ್ರಾಯಾಶ್ಚಿತ್ ಮತ್ತು ಬೇರೆ ಬೇರೆ ಇಚ್ಛೆಗಳ ಸಿದ್ಧಿಗ ಬೇರೆ ಬೇರೆ ಯಜ್ಞ ಮತ್ತು ದಾನಗಳನ್ನು ಶಾಸ್ತ್ರದಲ್ಲಿ ಹೇಳಿದ್ದಾರೆ. ಈ ಎಲ್ಲಸಾಧನೆಗಳು ಕಷ್ಟ ಸಾಧ್ಯಗಳು. ಅಲ್ಲದೆ ಹಿಂಸೆ ಎಂಬ ದೋಷದಿಂದ ಕೂಡಿದವುಗಳು ಆಗಿವೆ. ಆದರೆ ಭಗವಂತನ ನಾಮಸ್ಮರಣೆ ಎಂಬ ಸಾಧನೆ ಹಾಗೆ ಇರದೆ "ಸುಖವನ್ನು ಸಂಪಾದಿಸುವಂತಹದಾಗಿದೆ. ಇದಕ್ಕೆ ವೇದದ ಸಾಧನೆಯಂತೆ ಹಿಂಸೆ ದ್ರವ್ಯಾಂತರ"–ಪುರುಷಾಂತರ–ಹಾಗೆಯೇ ದೇಶ ಕಾಲ ಶೌಚವೆಂಬ ನಿಯಮ ಮೊದಲಾದವುಗಳ ಅವಶ್ಯಕತೆ ಇರುವುದಿಲ್ಲ. ಎಲ್ಲ ಪಾಪಗಳನ್ನು ನಾಶಮಾಡುವುದರಲ್ಲಿ ಮತ್ತು ಪುರುಷಾರ್ಥಕಗಳನ್ನು ಸಂಪಾದಿಸಿ ಕೊಡುವದರಲ್ಲಿ ಬೇರೆ ಯಾವ ಅಂಗಗಳ ಅವಶ್ಯಕತೆ ಇಲ್ಲದೇ ಇರುವ ಇದು ಸ್ವತಂತ್ರ ಸಾಧನೆಯಾಗಿರುತ್ತದೆ. ಅಂತೆಯೇ ಎಲ್ಲರಲ್ಲಿ ಶ್ರೇಷ್ಠವೂ ಇದೆ. ಹೀಗೆ ಶ್ರೀ ಶಂಕರಾಚಾರ್ಯರು ಶ್ರೀ ವಿಷ್ಣು ಸಹಸ್ರನಾಮ ಭಾಷೆಯಲ್ಲಿ ಹೇಳಿದ್ದಾರೆ.

ಎಲ್ಲಾ ಪಾಪಕ್ಷಯಕ್ಕೆ ಮುಖ್ಯ ಉದ್ದೇಶ್ಯವಾದ ಮತ್ತು ಎಲ್ಲಾ ಪುರುಷಾರ್ಥಗಳ ಸಾಧನದ ಉದ್ದೇಶವಾದ ನಾಮ ಸ್ಮರಣೆಯಂತಹ ಬೇರೆ ಸಾಧನೆಯಾವುದೂ ಇಲ್ಲ.



ನಾಮಸ್ಮರಣೆಯಲ್ಲಿ ತಪ್ಪು ಇಲ್ಲದೆಮತ್ತು ದೂಷಣೆ ರಹಿತನಾದ ಮನುಷ್ಯನಿದ್ದರೆ ಅವನಿಗೆ ಖರೋಬರಿ ಉಚ್ಚಾರದಿಂದ ಕೃತಕೃತ್ಯತೆ ಪ್ರಾಪ್ತವಾಗುವುದು ಆದರೆ ಯಾವನಿಗೆ ಪಾಪದ ಅಡ್ಡಿಯಿಂದ ತತ್ಕಾಲದಲ್ಲಿ ಸಿದ್ಧಿಯು ಪ್ರಾಪ್ತವಾಗುವದಿಲ್ಲ ಅವನು "ಸಂತತಜಪ,, ವನ್ನು ಮಾಡಬೇಕು, ಆದರಿಂದ ಅವನಿಗೆ ಪಾಪಕ್ಷಯದಿಂದ ಅಭ್ಯುದಯವು ಪ್ರಾಪ್ತವಾಗುವದು. ಹೀಗೆ ಪೂರ್ವಜರು ಶೃತಿ ಸ್ಮೃತಿ ಪುರಾಣಗಳ ಆಧಾರದಿಂದ ಪ್ರತಿಪಾದಿಸಿರುವರು, ಮತ್ತು ಸಂತರು ಶರಣರು ಒಳ್ಳೆ ನಡತೆಯಿಂದ ಜಗತ್ತಿನ ನಿದರ್ಶನಕ್ಕೆ ತಂದಿದ್ದಾರೆ. ನಾಮ ಜಪದಿಂದ ಬೇಕಾದ ಸಿದ್ಧಿಯನ್ನು ಹೊಂದಲು ಬಹುದು "ಸಿದ್ಧಿ,, ಶಬ್ದದ ಮೂಲಕ ಹೆದರಬಾರದು. ವೇದಾಂತಿಗಳು ನೈಷ್ಕರ್ಮಸಿದ್ಧಿ,; ಅಥವಾ ಮೋಕ್ಷಸಿದ್ಧಿ ಇಷ್ಟೇ ಅರ್ಥ ತೆಗೆದುಕೊಳ್ಳಬೇಕು. ಹೆಚ್ಚೇನು ಹೇಳಬೇಕು. ನಾಮ ಸ್ಮರಣದಿಂದ ಪ್ರಾರಬ್ಧ ಲಿಖಿತವನ್ನು ಕೂಡ ಬದಲಿಸಬಹುದು. ಪ್ರಾರಬ್ಧವನ್ನು ಭೋಗಿಸದೇ ಕಳೆಯಲಾಗದು ಎಂದು ಅನ್ನುವರು. ಇದು ಕೂಡ ನಿಜವಿರುವದು. ಆದರೆ "ಪುರುಷ ಪ್ರಯತ್ನದಿಂದ,, ಅದನ್ನು ಹೊಡೆದೋಡಿಸಬಹುದು. ಇದೂ ಕೂಡ ಸುಳ್ಳಲ್ಲ. ನಳ, ರಾಮ, ಯುಧಿಷ್ಠರ ನೊದಲಾದವರ ಉದಾಹರಣೆ ಮೊದಲನೆಯ ವರ್ಗದಲ್ಲಿ ಕೊಡಲಾಗುವುದು ಹಾಗೆಯೇ ಮಾರ್ಕಂಡೇಯ, ಸತ್ಯಮಾನ, ಭದ್ರಾಯು ಮೊದಲಾದವರ ಉದಾಹರಣೆ ಎರಡನೇ ವರ್ಗದಲ್ಲಿ ಸಿಗುವವು ಅಂದರೆ ಪುರುಷ ಪ್ರಯತ್ನದಿಂದ ಕೆಡಕು ಪ್ರಾರಭ್ಧವೂ ಕೂಡ ಹಿಂದೇಟು ಆಗುವುದರಲ್ಲಿ ಸಂಶಯವಿಲ್ಲ.

"ಲಿಖಿತ ನಾಮ ಜಪದ ಸಂಖ್ಯೆಯು ಬೀಗದ ಕೈ ಇದ್ದಂತೆ,,

ಸಕಾಮ ನಾಮ ಸ್ಮರಣೆಯ ಒಂದನೆಯ ಪ್ರಕಾರ—ನಾಮ ಮಂತ್ರದ ಎಷ್ಟು ಅಕ್ಷರಗಳು ಇರುವವೋ ಅಷ್ಟು ಲಕ್ಷ ಜಪವನ್ನು ಸ್ನಾನ ಮಾಡಿ ಪವಿತ್ರತೆಯಿಂದ ಮಾಡಬೇಕು. ಈ ಜಪವನ್ನು ಆ ಸಂಖ್ಯೆ ಪೂರ್ಣವಾಗುವವರೆಗೆ ಊಟದ ಮೊದಲು ಎಷ್ಟು ಆಗ ವವೋ ಅಷ್ಟು ಮಾಡಬೇಕು. ಉದಾಹರಣೆಗೆ—ಓಂ ನಮಃ ಶಿವಾಯ ಈ ಮಹಾಮಂತ್ರಕ್ಕೆ ಆರು ಅಕ್ಷರಗಳಿವೆ. ಆರು ಲಕ್ಷ ಮಾಡಿದರೆ ಸಾಕು ಅಷ್ಟಾದ ನಂತರ ಅದೇ ಮಂತ್ರದಿಂದ ಪವಿತ್ರತೆಯಿಂದ ಪ್ರತಿ ದಿನವೂ ೧೦೦೮ ಜಪದ ನಿಯಮವನ್ನು ಹಾಕಿಕೊಳ್ಳಬೇಕು.

ನಿಷ್ಕಾಮ ಸಿದ್ಧಿಯ ಪ್ರಕಾರ—ಮಂತ್ರದ ಎಷ್ಟೇ ಅಕ್ಷರಗಳು ಇರಲಿ ಇಷ್ಟೇ ಕೋಟಿ ಎಂದು ಸಂಕಲ್ಪ ಮಾಡದೇ ಒಂದೇ ಸಮನೆ ಜಪ ಮಾಡುತ್ತಿರಬೇಕು. ಹೀಗೆ ಮಾಡುತ್ತಿರುವಾಗ ಪ್ರತಿಯೊಂದು ಕೋಟಿ ಜಪಕ್ಕೆ ಈಶ್ವರನ ನಿಯಮದಂತೆ ತಮ್ಮ ಜನ್ಮ ಕುಂಡಲಿಯಲ್ಲಿಯ ಒಂದೊಂದು ಸ್ಥಾನಗಳು ಶುದ್ಧಿಯಾಗುತ್ತ ಹೋಗುವುವು. ೧೨ ಕೋಟಿಯಿಂದ ೧೨ ಸ್ಥಾನಗಳು ಶುದ್ಧವಾಗು

ವುಪ್ರ. ಒಂಭತ್ತು ಕೋಟಿ ಪೂರ್ಣವಾದ ಮೇಲೆ ಗುರು ರೂಪದಿಂದ ಸ್ವಪ್ನದಲ್ಲಿ ಇಲ್ಲವ ಪ್ರಾತ್ಯಕ್ಷ ಅನುಗ್ರಹ ಸಿಕ್ಕಿ ಕೃತಾರ್ಥತೆ ಪ್ರಾಪ್ತವಾಗುವುದು. ಮುಮುಕ್ಷ ತ್ವವು ಶೀರಿ ಉತ್ತಮ ಸಾಧಕ ಕೋಟಿಯಲ್ಲಿ ಎಣಿಕೆ ಮಾಡಲು ಯೋಗ್ಯವಾಗುವದು. ಮತ್ತು ಪೂರ್ಣತೆಯು ಬೇಗನೆ ಪ್ರಾಪ್ತವಾಗುವುದು. ೧೨ ಸ್ಥಾನಗಳ ಶುದ್ಧಿಯಾದ ಮೇಲೆ ಜೀವವು ಗ್ರಹ ಕಕ್ಷೆಯಿಂದ ಬಿಡುಗಡೆ ಹೊಂದಿ ಪರಮಾತ್ಮನ ಕಕ್ಷೆಯಲ್ಲಿ ಹೊಗುವುದು ಆಧ್ಯಾತ್ಮದ ಉನ್ನತಿಯಾಗುವದು. "ಸಗುಣ ಸಾಕ್ಷಾತ್ಕಾರ" ಮತ್ತು "ಗುರು ಅನುಗ್ರಹ, ಈ ಎರಡುಈ ನಿಷ್ಕಾಮ ಅನುಷ್ಠಾನದಲ್ಲಿ ಮುಖ್ಯವಾಗಿರುವದು.

[ಮುಂದಿನ ಲೇಖನ— ಕುಂಡಲಿಯಲ್ಲಿಯ ೧೨ ಸ್ಥಾನಗಳ ವಿಚಾರ.]

---

### ಸದಾಚಾರದಿಂದಿರುವುದು

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ ಇಂತಪ್ಪ ತ್ರಿವಿದಾಮೃತವ ದಣಿಯಲೆರೆದು ಸಲಹಿದರೆನ್ನ ವಿವಾಹವ ಮಾಡಿದಿರಿ. ಸಯವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡಿಗೆ ಹ್ವವ ತಾಹೆನಲ್ಲದೆ ಹುಲ್ಲ ತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು. ಮರಳಿ ಬಿಜಯಂಗೈವುದು ಶರಣಾರ್ಥಿ.

❖ ❖ ❖ ❖ ❖

ಅಯ್ಯಾ. ಸದಾಚಾರ, ಸದ್ಭಕ್ತಿ, ಸುಕ್ರಿಯೆ, ಸಮ್ಯಜ್ಞಾನ, ಸದ್ವರ್ತನೆ, ಸಗುಣ, ನಿರ್ಗುಣ, ನಿಜಗುಣ, ಸಚ್ಚರಿತ, ಸದ್ಭಾವ ಅಕ್ರೋದ, ಸತ್ಯವಚನ, ಕ್ಷಮೆ, ದಮೆ, ಭವಿಭಕ್ತ ಭೇದ, ಸತ್ಪಾತ್ರ, ದ್ರವ್ಯಾರ್ಪಣ, ಗೌರವ ಬುದ್ಧಿ, ಲಿಂಗಲೀಯ, ಜಂಗಮಾನುಧಾನ, ದಶವಿಧ ಪಾದೋದಕ, ಏಕಾದಶ ಪ್ರಸಾದ, ಷೋಡಶಭಕ್ತಿ ನಿರ್ವಾಹ, ತ್ರಿವಿಧ ಷಡ್ವಿಧ ನವವಿಧ ಲಿಂಗಾರ್ಚನೆ, ಚಿದ್ವಿಭೂತಿ ಸ್ನಾನ ಧೂಳನ ಧಾರಣ, ಸರ್ವಾಂಗದಲ್ಲಿ ಚಿದ್ರುದ್ರಾಕ್ಷಿ ಧಾರಣ, ತಾ ಮಾಡುವ ಸತ್ಯ ಕಾಯಕ, ತಾ ಬೇಡುವ ಸದ್ಭಕ್ತಿ ಭಿಕ್ಷ, ತಾ ಕೊಟ್ಟು ಕೊಂಬುವ ಭೇದ' ತಾನಾಚರಿಸುವ ಸತ್ಯ ನಡೆ ನುಡಿ, ತಾನಿಂದ ನಿರ್ವಾಣ ಪದ, ಇಂತೀ ಮೂವತ್ತೆರಡು ಕಲೆಗಳ ಸದ್ಗುರು ಮುಖದಿಂದರಿದ ಬಸವ ಮೊದಲಾದ ಸಮಸ್ತ ಪ್ರಮಥಗಣಂಗಳಿಗೆಲ್ಲ ನಿರಾಧಾರಿ ವೀರಶೈವ ಸನ್ಮಾರ್ಗವಿಡಿದಾಚರಿಸಿದರು ನೋಡಾ. ಇಂತು ಪ್ರಮಥಗಣಂಗಳಾಚರಿಸಿದ ಸತ್ಯ ಸನ್ಮಾರ್ಗವನರಿಯದ ಮೂಢ ಅಧಮರನೆಂತು ಶಿವಶಕ್ತಿ ಶಿವಭಕ್ತಿ ಶಿವಜಂಗಮವೆಂಬೆವನಯ್ಯಾ ಚನ್ನಮಲ್ಲಿಕಾರ್ಜುನಾ?

—ಅಕ್ಕಮಹಾದೇವಿ



# ಗ್ರಾಮಾಂತರ ಬಸವಜಯಂತಿ

—ಹೆಚ್. ವಿ. ವೀರಭದ್ರಯ್ಯ.

ಆತ್ಮೀಯ ಶರಣಬಂಧು,

ತುಮಕೂರಿನ ಪಶ್ಚಿಮಕ್ಕೆ ಭೀಮಸಂದ್ರ ಒಂದು ಕಿಲೋ ಮೀಟರ್ ದೂರ ಅಷ್ಟೆ. ಗದ್ದೆ ತೋಟಗಳ ಮಡಿಲು. ರೈತರು, ಕಾರ್ಮಿಕರು ಊರಿನ ಕುಂಬ, ಗಣಪತಿ ಬ್ರಿಕ್ ಅಂಡ್ ಟೈಲ್ಸ್ ಕಾರ್ಖಾನೆ. ಸುತ್ತಾ ಮುತ್ತಾ ದೀನ-ದಲಿತರ ಮನೆಗಳು. ಬೆಂಗಳೂರು ಹೊನ್ನಾವರ ಹೆದ್ದಾರಿ ಹೊಂದಿಕೊಂಡ ಪರಿಸರ. ನಗರ ಗ್ರಾಮ ಸಂಸ್ಕೃತಿಗಳ ಸಂಗಮ ಸ್ಥಾನ. ಅಲ್ಲಿ ಬಸವ ಜಯಂತಿ ತಾ|| 22·2·86 ರಂದು. ಗಣಪತಿ ಬ್ರಿಕ್ ಮತ್ತು ಹೆಂಚಿನ ಕಾರ್ಖಾನೆ ಮಾಲೀಕರು ಶರಣಬಂಧು ಶ್ರೀ ಜಗನ್ನಾಥ್, ದಿವಂಗತ ಶ್ರೀ ಶ್ರೀಕಂಠಪ್ಪನವರ ಮಕ್ಕಳು ಶ್ರೀ ಮಠಕ್ಕೂ ಅವರಿಗೂ ಬಳ್ಳಿ ಬಾಂಧವ್ಯ. ಸಮಾರಂಭದ ಆಚರಣೆಗೆ ಮೂಲ-ಕಾರಣರು ಶ್ರೀ ಜಗನ್ನಾಥ್ ಮತ್ತು ಅವರ ಆಪ್ತೇಷ್ಟರು. ಪರಮಪೂಜ್ಯ ಶ್ರೀ ಶ್ರೀ ಗಳವರನ್ನು ಕಲಶ ಕನ್ನಡಿಯೊಂದಿಗೆ ಭಕ್ತಿಪೂರ್ವಕ ಸ್ವಾಗತ. ಭೀಮಸಂದ್ರದುದ್ದಕ್ಕೂ ಉತ್ಸವ. ಭೀಮೇಶ್ವರ ಲಿಂಗದ ಪ್ರತಿಷ್ಠಾಪನೆ ಪುಣ್ಯದೃಶ್ಯ. ಪರರ ಪೂಜ್ಯರ ದರ್ಶನ ಪವಿತ್ರ. ಬಸವ ಸ್ಮರಣೆ ಚೈತನ್ಯ ಪೂರ್ಣ. ಬಸವ ಸಂದೇಶದ ಹರಿಕಾರರು ಪೂಜ್ಯ ಶ್ರೀ ಶ್ರೀಗಳು ನಾಡಿಗಿಂದು ಶಾಪವೆಂಬಂತೆ ಸೋಮಾರಿತನ ಕವಿದಿದೆ. ಅಪ್ರಮಾಣಿಕತೆ ನರ್ತಿಸಿದೆ. ಇದರ ಪರಿಹಾರಕ್ಕೆ ಬಸವಣ್ಣ ಹೋರಾಟ ನಡೆಸಿದ. ದುಡಿಮೆಯಿಂದ ಬರುವ ಗಳಿಕೆ ಬದುಕಿನ ಹೂವು: ಅದು ಶಿವಾರ್ಪಿತವಾಗಬೇಕು. ದುಡಿಮೆ ಬಸವ ತತ್ವದ ತಾಯಿ ಬೇರು. ದುಡಿಮೆಗೆ ಮೇಲು ಕೀಳೆಂಬ ಭಾವನೆ ಇಲ್ಲ. ದಾಸೋಹ ದುಡಿಮೆಯ ಪರಿಮಳ. ದುಡಿಮೆ-ದಾಸೋಹಗಳು ಗುರು ಕಾರುಣ್ಯದ ವಿನಮ್ರ ಪುಷ್ಪಗಳು. ನಮ್ಮ ಜೀವನ ಪ್ರಾಕೃತ ಹಂತದಿಂದ ಸುಸಂಸ್ಕೃತವಾಗಬೇಕು. ಮಾತು ಮೃದುವಾಗಿರಬೇಕು ಎಂದು ಕಲಿಸಿದರು ಬಸವಣ್ಣ"— ಎಂದು ಉಪನ್ಯಾಸ ಮಾಡಿದರು. ಸಿದ್ಧಗಂಗಾ ಸಂಜೆ ಕಾಲೇಜಿನ ಪ್ರಾಚಾರ್ಯರಾದ ಶ್ರೀ ವೀರಭದ್ರಯ್ಯನವರು.

"ದೇವರಿಲ್ಲ, ವೈಜ್ಞಾನಿಕ ಯುಗವಿದು, ನಮ್ಮ ಬದುಕಿಗೆ ನಾವೇ ಹೊಣೆ ಎನ್ನುವ ಕಾಲದಲ್ಲಿ ಭೀಮಸಂದ್ರದ ಬಂಧುಗಳು ಬಸವ ಜಯಂತಿ ಆಚರಿಸುತ್ತಿರುವುದು ಅರ್ಥಪೂರ್ಣವಾಗಿದೆ. ನಮ್ಮ ಬದುಕಿಗೆ ನಾವೇ ಹೊಣೆಯಾದರೂ, ಆ ಬದುಕನ್ನು ರೂಪಿಸುವ ಪ್ರಯತ್ನದಲ್ಲಿ ಪೂರ್ವಿಕರ, ಮಹಾಪುರುಷರ, ಶರಣರ, ಸಂತರ ಜೀವನದ ಕೊಡುಗೆ ಅಪಾರವಾಗಿದೆ. ಎಂಬುದನ್ನು ನಾವು

ಮರೆಯಬಾರದು. ಬಸವಣ್ಣನವರ ಜೀವನ ನಮಗೆ ಅಂತಹ ದಾರಿ ದೀಪವಾಗಿದೆ—" ಎಂದು ಮಾತನಾಡಿದರು. ತುಮಕೂರಿನ ಸಮಾಜ ಮುಖಂಡರಾದ ಡಾ|| ಟಿ. ಎಸ್. ಮಲ್ಲಿಕಾರ್ಜುನಯ್ಯನವರು,

ಗದ್ದೆಯಲ್ಲಿ ಕೃಷಿಮಾಡುವ, ನಾಟಿ ಹಾಕುವ, ಕಳೆ ಕೀಳುವ, ಹೊಲ ಉತ್ತು, ಬಿತ್ತಿ ಬೆಳೆಯುವ, ಹರಿಕು ಬಟ್ಟೆ, ಕುರುಚಲು ಗಡ್ಡದ, ಚಿಂದಿಯುಟ್ಟ ಗರತಿಯರ ಹೃದಯ ತುಂಬಿ ಹೊರ ಬಂದ ಹಾಡುಗಳಲ್ಲಿ ಬಸವಣ್ಣನ ಸರಳ ಸುಂದರ ಚಿತ್ರವನ್ನು ಸಿದ್ಧಗಂಗಾ ಕಾಲೇಜಿನ ಅಧ್ಯಾಪಕರಾದ ಶ್ರೀ ಹೆಚ್. ವಿ. ವೀರಭದ್ರಯ್ಯ ಬಿಡಿಸಿದರು.

"ಬಸವಣ್ಣ ಒಂದು ಸಮಾಜದ ವ್ಯಕ್ತಿ ಎಂಬ ಭಾವನೆ ಅಳಿಯಬೇಕು. ಅದಕ್ಕಾಗಿ ವಿಚಾರವಂತರು ಶ್ರಮಿಸಬೇಕು. ಸರಿಯಾಗಿ ಪರಿಚಯ ಮಾಡಿಕೊಡಬೇಕು. ಜೀವನ ಪ್ರೇಮಿಯಾದ ಬಸವಣ್ಣನವರ ಅರ್ಥಪೂರ್ಣ ಸಂದೇಶ ಎಲ್ಲ ವರ್ಗದ ಜನರನ್ನು ಮುಟ್ಟುವಂತಾಗಬೇಕು ಸಮಸ್ಯೆಗಳ ಯುಗದಲ್ಲಿಂದು ದಾರಿಕಾಣದವರಾಗಿದ್ದೇವೆ. ಜಗತ್ತು ವೇಗಗತಿಯಲ್ಲಿ ಸಾಗಿದೆ. ಆದರೆ ದುರ್ದೈವ, ವೇಗದಲ್ಲಿ ವಿನಯವಿಲ್ಲ, ವಿಚಾರವಿಲ್ಲ, ಮೌಲ್ಯಗಳಿಲ್ಲ. ಇಂದಿನ ಸಮಸ್ಯೆಗಳಿಗೆಲ್ಲ ಬಸವ ಮಾರ್ಗವೊಂದೇ ಪರಿಹಾರ. ಸ್ವಾತಂತ್ರ್ಯ ಬಂದು 38 ವರ್ಷಗಳಾದರೂ ರಾಷ್ಟ್ರಜೀವನ ಸುಭಿಕ್ಷವಾಗಿಲ್ಲ. ನಾಯಕರ ವೈಫಲ್ಯತೆ ಎದ್ದು ಕಾಣುತ್ತಿದೆ. ಜನತೆ ಜಡವಾಗಿದೆ. ಕ್ರಿಯಾಮುಖವಾಗಬೇಕು ಬದುಕು. ಬಸವಣ್ಣನವರ ವಿನಯದ ಕರೆ ಅದು. ಮಾನವ ವಿವೇಚನಾ ಶಕ್ತಿಯ ಸದುಪಯೋಗ ಮಾಡಿಕೊಳ್ಳಬೇಕು. ಇಂದಿನ ವಿಲಕ್ಷಣ ಜೀವನ, ಮೌಲ್ಯಗಳ ಅವನತಿ, ಭಾವನೆಗಳ ಕಲಸು ಮೇಲೋಗರ, ನೈತಿಕ ದಿವಾಳಿಯಿಂದ ಜೀವನ ತಳಕಚ್ಚಿದೆ. ಅದು ಮೇಲೇಳಬೇಕಾದರೆ "ಕಾಯಕ" ಮಂತ್ರವೊಂದೇ ಪರಿಹಾರ ಪಥ "ಕಾಯಕ-ಲಿಂಗಪೂಜೆ' ಅಭಿನ್ನ. ಒಂದಕ್ಕೊಂದು ಪೂರಕ. ಕಾಯಕಗಳೆಲ್ಲವೂ ಪವಿತ್ರ. "ಉತ್ತು ಬಿತ್ತುವ ಮಂತ್ರ, ಬಿತ್ತಿ ಬೆಳೆಯು ಮಂತ್ರ"- ಕಾಯಕ. ಜನ ಬದುಕಬೇಕೆಂದು ಹೋರಾಟ ನಡೆಸಿದವನು ಬಸವಣ್ಣ. ಕಾಯಕ ಜೀವಿ ಮತ್ತೊಬ್ಬರ ವಸ್ತುವಿಗೆ ಬಾಯಿ ಬಿಡುವುದಿಲ್ಲ ಎಂಬುದನ್ನು ಬಸವಣ್ಣನವರ ಜೀವನದಿಂದ ನಾವು ಮನಗಾಣಬಹುದು"- ಎಂಬುದಾಗಿ ಆಶೀರ್ವಚನ ಮಾಡಿದರು ಪರಮ ಪೂಜ್ಯ ಶ್ರೀ ಶ್ರೀಗಳವರು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ಪ್ರದರ್ಶಿತವಾಯಿತು. ತುಮಕೂರಿನ ಅಜುಬಾಜಿನ ಗ್ರಾಮದ ಬಂಧುಗಳಿಂದ ನಾಟಕದ ಮೈದಾನ ತುಂಬಿ ಬಿ. ಹೆಚ್. ರಸ್ತೆ ಸಂಚಾರ ಸ್ಥಗಿತವಾಗುವಷ್ಟು ಜನಸಂದಣಿಯಾಯಿತು. ನಾಟಕ ಮುಗಿದಾಗ ಬೆಳಗಿನ ಕೋಳಿ ಕೂಗಿತು.

(ಮತ್ತೆ ಬರೆಯುತ್ತೇನೆ.)

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.